


# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine



Vol-14 June - 2017 Issue No. 06 ₹ 10/-





Sri P.G.R. Sindhia, SCC Welcomed Sri Vajubhai Vala, Hon'ble Governor of Karnataka & Patron of Bharat Scouts & Guides, Karnataka at Banquet Hall of Rajbhavan, Bengaluru on 27th June 2017 on the ocassion of Felicitating Senior Scout Masters, Guide Captains, Best Working Local Associations & Open Units of Karnataka State. Smt. Geetha Nataraj, National Vice President of BS&G and State Commissioner(G) of Karnataka is Present.





Group Photo of Awardee Scout Masters, Guide Captions, Senior Volunteers, Best Local Association and open Unit representatives with Sri Vajubhai Vala, Hon'ble Governor of Karnataka & Patron of BS&G, Karnataka at Rajbhavan, Bengaluru. Sri P.G.R. Sindhia, State Chief Commissioner, Sri Kondajji B. Shanmukhappa, Vice President, Smt. Geetha Nataraj, SC(G) & Sri C.S. Reddy, State Secretary are seen.

ಜೂನ್ 05 ರಂದು ಪರಿಸರ ಮತ್ತು ಜೀವಶಾಸ್ತ್ರ ಇಲಾಖೆ, ಕರ್ನಾಟಕ ಸರ್ಕಾರ ಮತ್ತು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಸಂಯುಕ್ತಾಶ್ರಯದಲ್ಲಿ ಕೃಷಿ ವಿಶ್ವವಿದ್ಯಾಲಯದ ಡಾ॥ ಬಾಬು ರಾಜೇಂದ್ರ ಪ್ರಸಾದ್ ಸಭಾಂಗಣದಲ್ಲಿ ನಡೆದ "ವಿಶ್ವ ಪರಿಸರ ದಿನಾಚರಣೆ" ಸಂದರ್ಭದಲ್ಲಿ ಶ್ರೀ ಸಿದ್ಧರಾಮಯ್ಯ, ಸನ್ಮಾನ್ಯ ಮುಖ್ಯಮಂತ್ರಿಗಳು ಕರ್ನಾಟಕ ಸರ್ಕಾರ, ಶ್ರೀ ಬಿ. ರಮಾನಾಥ್ ರೈ, ಮಾನ್ಯ ಸಚಿವರು, ಅರಣ್ಯ ಮತ್ತು ಜೀವಶಾಸ್ತ್ರ ಇಲಾಖೆ, ಕರ್ನಾಟಕ ಸರ್ಕಾರ, ಶ್ರೀ ಕೆ. ಲಕ್ಷ್ಮಣ್, ಅಧ್ಯಕ್ಷರು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಹಾಗು ಇತರರನ್ನು ಕಾಣಬಹುದು.





ಇದೇ ಸಂದರ್ಭದಲ್ಲಿ ಭಾಗವಹಿಸಿದ್ದ ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಯ ಸ್ಕೌಟ್-ಗೈಡ್‌ಗಳು




# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*





ಸಂಚಿಕೆಯ ವಾರ್ಷಿಕ ಚಂದಾ ರೂ. 100 / -
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100 / - ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು-560 001
ಇಲ್ಲಿಗೆ ಕಳುಹಿಸಲು ಕೋರಿದೆ.
ದೂ: 080-2226 0017, 2226 7470


## ಪರಿವಿಡಿ


- ರಾಜ್ಯ ಮುಖ್ಯ ಆಯುಕ್ತರ ನುಡಿ
- ರಾಜ್ಯ ವಾರ್ತೆಗಳು
- Governor Presented Commendation Certificates
- Observance of "World Day Against Child Labour"
- ರಾಷ್ಟ್ರೀಯ ಮಟ್ಟದ ಶಿಕ್ಷಕರ ಸಮಾವೇಶ
- 3ನೇ ಅಂತರಾಷ್ಟ್ರೀಯ ಯೋಗ ದಿನಾಚರಣೆ
- ಅಭಿನಂದನೆಗಳು
- ಜಿಲ್ಲಾ ವಾರ್ತೆಗಳು
- ಫಿಲ್‌ಮೌಂಟ್ ಸ್ಕೌಟ್ ರ್‍ಯಾಂಚ್ ರಾಷ್ಟ್ರೀಯ ತರಬೇತಿ ಶಿಬಿರ ಬಾಯ್ ಸ್ಕೌಟ್ಸ್ ಆಫ್ ಅಮೆರಿಕ
- Condolence Message, ನುಡಿನಮನ
- 5ನೇ ತರಗತಿ ಪಠ್ಯ ಪುಸ್ತಕದಲ್ಲಿ ಸ್ಕೌಟ್-ಗೈಡ್ ಮಾಹಿತಿ
- ಸ್ಕೌಟ್ ದಳದಲ್ಲಿ ಶ್ರೀ ಸತ್ಯಸಾಯಿ





ನಮ್ಮ ಸಂಸ್ಥೆಯ ವೆಬ್‌ಸೈಟ್:
**www.bsgkarnataka.org**
**www.kondajjibasappa.org**
**www.kondajjibasappa.com**

ನಮ್ಮ ಸಂಸ್ಥೆಯ ಫೇಸ್‌ಬುಕ್:
**The Bharat Scouts-Guides Karnataka**





# ರಾಜ್ಯ ಮುಖ್ಯ ಆಯುಕ್ತರ ನುಡಿ

ಪ್ರಿಯ ಓದುಗ ಬಂಧುಗಳೇ,

ಸಸ್ನೇಹ ನಮಸ್ಕಾರಗಳು

ಹಲವಾರು ಚಟುವಟಿಕೆಗಳ ನಡುವೆ ಕಳೆದ ತಿಂಗಳು ನಾವು ಒಂದು ದುಃಖದ ಸನ್ನಿವೇಶವನ್ನು ಎದುರಿಸಬೇಕಾಯಿತು. ನಮ್ಮ ಸಂಸ್ಥೆಯ ಹಿರಿಯ ತರಬೇತಿ ನಾಯಕಿ, 1964ರಿಂದಲೂ ಸ್ಕೌಟ್ ಮತ್ತು ಗೈಡ್ ಚಳವಳಿಯಲ್ಲಿ ಕ್ರಿಯಾಶೀಲವಾಗಿ ಭಾಗವಹಿಸುತ್ತಿದ್ದ ಶ್ರೀಮತಿ ಎಸ್.ಕೆ. ಪ್ರಭಾರವರು ಮೇ 30ರಂದು ಅಲ್ಪಕಾಲದ ಅನಾರೋಗ್ಯದಿಂದಾಗಿ ದೈವಾಧೀನರಾದರು. ಸಮಾಜಸೇವೆ, ಬರವಣಿಗೆ, ತರಬೇತಿ, ಹೊಸರೀತಿಯ ಕಾರ್ಯಕ್ರಮಗಳನ್ನು ರೂಪಿಸುವ, ಉಪನ್ಯಾಸ ನೀಡುವ, ಸ್ಕೌಟ್ ಮತ್ತು ಗೈಡ್‌ಗಳಿಗಾಗಿ ಕೈಪಿಡಿಗಳನ್ನು, ಪುಸ್ತಕಗಳನ್ನು ರಚಿಸುವ ಚಟುವಟಿಕೆಗಳಲ್ಲಿ ಅವರು ಯಾವಾಗಲೂ ತೊಡಗಿಕೊಂಡಿರುತ್ತಿದ್ದರು.

ಸ್ವಾತಂತ್ರ್ಯ ಹೋರಾಟಗಾರರ ಕುಟುಂಬದಲ್ಲಿ ಜನಿಸಿದ ಶ್ರೀಮತಿ ಎಸ್.ಕೆ. ಪ್ರಭಾರವರು ನೈಸರ್ಗಿಕ ವಿಜ್ಞಾನದಲ್ಲಿ ಪದವಿಯನ್ನು ಪಡೆದ ನಂತರ ಎಂ.ಎಡ್., ಇಂಗ್ಲೀಷಿನಲ್ಲಿ ಸ್ನಾತಕೋತ್ತರ, ಹಿಂದಿಯಲ್ಲಿ ರಾಷ್ಟ್ರಭಾಷಾ ಪ್ರವೀಣ್ ಮುಂತಾದ ಹಲವಾರು ಪದವಿಗಳನ್ನೂ ಪಡೆದಿದ್ದರು. 1964ರಲ್ಲಿ ಶಿಕ್ಷಕಿಯಾಗಿ ತಮ್ಮ ಸೇವೆಯನ್ನು ಆರಂಭಿಸಿದರು. ಜೊತೆ-ಜೊತೆಗೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಕ್ರಿಯಾಶೀಲವಾಗಿ ತೊಡಗಿಸಿಕೊಂಡರು.



ಶಿಕ್ಷಕಿಯಾಗಿ ಅವರು ಮಾಡಿದ ಸಾಧನೆಗಳು ಅಪಾರ. ಉತ್ತಮ ಶಿಕ್ಷಕಿಯಾಗಿ ಜಿಲ್ಲಾ ಮತ್ತು ರಾಜ್ಯ ಪ್ರಶಸ್ತಿ, ಗೈಡಿಂಗ್‌ನಲ್ಲಿ 1970ರಲ್ಲಿ ಪ್ರತಿಭಾ ಪುರಸ್ಕಾರ, 2010ರಲ್ಲಿ ರಾಷ್ಟ್ರಪತಿಗಳಿಂದ ಸಿಲ್ವರ್ ಸ್ಟಾರ್, 2016ರಲ್ಲಿ ಮತ್ತೆ ರಾಷ್ಟ್ರಪತಿಗಳಿಂದ ಬಾರ್-ಟು-ಸಿಲ್ವರ್ ಸ್ಟಾರ್ ಪ್ರಶಸ್ತಿಗಳನ್ನು ಪಡೆದರು. ಸ್ಕೌಟಿಂಗ್‌ಗೆ ಉಪಯುಕ್ತವಾಗುವ ಹಲವಾರು ಕೈಪಿಡಿಗಳು ಅವರ ಲೇಖನಿಯಿಂದ ಮೂಡಿಬಂದಿತ್ತು. ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಯೂ ಸೇರಿದಂತೆ, ರಾಜ್ಯ ಮಟ್ಟದ ಜಾಂಬೂರಿಗಳಲ್ಲಿಯೂ ಮಕ್ಕಳಿಗಾಗಿ ರಸಪ್ರಶ್ನೆ, ಚರ್ಚಾಸ್ಪರ್ಧೆ, ಆಶುಭಾಷಣ, ಪ್ರಬಂಧಸ್ಪರ್ಧೆ, ವಿನೋದದ ಆಟಗಳು ಮುಂತಾದವುಗಳನ್ನು ಏರ್ಪಡಿಸಿದ್ದರು.

ಶ್ರೀಮತಿ ಎಸ್.ಕೆ. ಪ್ರಭಾ ಅವರ ಅಕಾಲಿಕ ನಿಧನವು ನಮ್ಮ ಚಳವಳಿಗೆ ತುಂಬಲಾರದ ನಷ್ಟವಾಗಿದೆ. ಅವರಷ್ಟು ಬದ್ಧತೆಯನ್ನುಳ್ಳ ವ್ಯಕ್ತಿಗಳು ಅಪರೂಪವೆಂದೆನಿಸುತ್ತದೆ. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಪರವಾಗಿ ಮತ್ತು ವೈಯಕ್ತಿಕವಾಗಿ ನಾನು ಅವರ ಕುಟುಂಬಕ್ಕೆ ಸಂತಾಪಗಳನ್ನು ಸೂಚಿಸುತ್ತೇನೆ.

ನಮ್ಮ ಸಂಸ್ಥೆಗೆ ಶ್ರೀಮತಿ ಎಸ್.ಕೆ. ಪ್ರಭಾರವರು ಸಲ್ಲಿಸಿರುವ ಸೇವೆಯನ್ನು ಗೌರವಿಸಿ ಅವರ ಪಾರ್ಥಿವ ಶರೀರವನ್ನು, ಸಂಸ್ಥೆಯ ಕೇಂದ್ರ ಕಛೇರಿ ಶಾಂತಿಗೃಹಕ್ಕೆ ಮೇ 31ರಂದು ತಂದು ಗೌರವ ಸೂಚಿಸಲಾಯಿತು. ಜೂನ್ 15ರಂದು ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ "ನುಡಿ ನಮನ ಮತ್ತು ಶ್ರದ್ಧಾಂಜಲಿ ಸಭೆ"ಯನ್ನು ಏರ್ಪಡಿಸಲಾಗಿತ್ತು. ಸಭೆಯಲ್ಲಿ ಭಾಗವಹಿಸಿದ್ದ ಅಪಾರ ಜನಸಂದಣಿ ಶ್ರೀಮತಿ ಎಸ್.ಕೆ. ಪ್ರಭಾ ಅವರ ಜನಪ್ರಿಯತೆಗೆ ಸಾಕ್ಷಿಯಾಗಿತ್ತು. ಅವರ ನಡೆ-ನುಡಿ, ಕಾರ್ಯಕ್ಷಮತೆ ಮತ್ತು ಶ್ರದ್ಧೆಯು ನಮ್ಮ ಮುಂದಿನ ಚಟುವಟಿಕೆಗಳಿಗೆ ಸ್ಫೂರ್ತಿಯನ್ನು ನೀಡಬೇಕು. ಇವರ ಆಸೆಯಂತೆ ಗೈಡ್ ವಿಭಾಗಕ್ಕೆ

ಹೆಚ್ಚಿನ ಮಾನ್ಯತೆ ಮತ್ತು ಅನುದಾನ ನೀಡುವುದಾಗಿ, ಮ್ಯೂಜಿಯಂ ಪ್ರಾರಂಭಿಸುವುದಾಗಿ ತಿಳಿಸಿದರು. ಇವರ ಸ್ಕೌಟಿಂಗ್ / ಗೈಡಿಂಗ್ ಸೇವೆಯನ್ನು ನಾವು ಯಾವಾಗಲು ಸ್ಮರಿಸುತ್ತೇವೆ. ಕರ್ನಾಟಕದಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್‌ಅನ್ನು ಇನ್ನೂ ಹೆಚ್ಚು ಪ್ರವರ್ಧಮಾನಕ್ಕೆ ತರುವುದು, ನಾವು ಅವರಿಗೆ ಸಲ್ಲಿಸುವ ನಿಜವಾದ ಶ್ರದ್ಧಾಂಜಲಿ ಎಂದು ನನಗೆ ಅನಿಸುತ್ತದೆ.




ಶಾಲೆಗಳು ಪುನಃ ತೆರೆದಿವೆ. ಪಾಠ-ಪ್ರವಚನಗಳು ಆರಂಭವಾಗಿವೆ. ಜೊತೆ-ಜೊತೆಗೆ ಪಠ್ಯೇತರ ಕಾರ್ಯಕ್ರಮಗಳು, ಹವ್ಯಾಸಗಳು, ಸ್ಪರ್ಧೆಗಳು ಎಲ್ಲವೂ ನಿಮ್ಮ ಶಿಕ್ಷಣದ ಪಠ್ಯೇತರ ಭಾಗವಾಗಿದೆ. ಓದಿನ ಜೊತೆಗೆ ಪಠ್ಯೇತರ ಚಟುವಟಿಕೆಗಳಲ್ಲೂ ತೊಡಗಿಸಿಕೊಳ್ಳಿ. ನಿಮ್ಮ ಸರ್ವತೋಮುಖ ಬೆಳವಣಿಗೆಗೆ ಅನುಕೂಲವಾಗುತ್ತದೆ.

ಸ್ಕೌಟ್‌ನ ಗಣತಿಯನ್ನು ಹೆಚ್ಚಿಸಬೇಕಾದ ಅಗತ್ಯ ಈಗ ತುರ್ತಾಗಿದೆ. ಹೊಸ ಮಕ್ಕಳಿಗೆ ಸ್ಕೌಟಿಂಗ್. ಮತ್ತು ಗೈಡಿಂಗ್ ಚಳವಳಿಯನ್ನು ಪರಿಚಯ ಮಾಡಿಕೊಡಿ. ದಳಗಳು ಕ್ರಿಯಾಶೀಲವಾಗಿರಲಿ. ವಿಶೇಷವಾಗಿ ಜಿಲ್ಲಾ ಸಂಸ್ಥೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ನಾನು ಮನವಿ ಮಾಡುತ್ತೇನೆ. ನಾವು ಸಂಸ್ಥೆಯನ್ನು ಬೆಳೆಸಿದಷ್ಟೂ ಹೆಚ್ಚು ಬೆಂಬಲ ಸಮಾಜದಿಂದ ನಮಗೆ ದೊರೆಯುತ್ತದೆ. ನಮ್ಮ ಸಂಸ್ಥೆಯ ಘನತೆಯೂ ಹೆಚ್ಚುತ್ತದೆ. ಚಳವಳಿಯನ್ನು ಶ್ರದ್ಧಾಪೂರ್ಣವಾಗಿ ಬೆಳೆಸುವುದು ನಮ್ಮ ಸಾಮಾಜಿಕ ಜವಾಬ್ದಾರಿ ಎಂಬುದನ್ನು ನಾವು ಮರೆಯಬಾರದು.

ಮೇ ತಿಂಗಳು ರಜಾ ಕಾಲವಾದ್ದರಿಂದ ಕೆಲವು ತರಬೇತಿ ಕಾರ್ಯಕ್ರಮಗಳನ್ನು ನಡೆಸಲು ಸಾಧ್ಯವಾಗಲಿಲ್ಲ. ಈಗ ತರಬೇತಿ ಕಾರ್ಯಕ್ರಮಗಳು ಮತ್ತು ಶಿಬಿರಗಳು ಪೂರ್ಣ ಪ್ರಮಾಣದಲ್ಲಿ ಆರಂಭವಾಗಿವೆ. ವಿಶೇಷವಾಗಿ ಗೈಡ್, ಕಬ್, ರೇಂಜರ್, ಸ್ಕೌಟ್, ರೋವರ್‌ಗಳ ತರಬೇತಿ ಕಾರ್ಯಕ್ರಮಗಳನ್ನು ಈ ತಿಂಗಳಲ್ಲಿ ನಡೆಸುತ್ತಿದ್ದೇವೆ. ಮುಂದಿನ ತಿಂಗಳುಗಳಲ್ಲಿ ತರಬೇತಿ ಕಾರ್ಯಕ್ರಮಗಳು ಹೆಚ್ಚು ವೇಗವನ್ನು ಪಡೆದುಕೊಳ್ಳುತ್ತವೆ. ದಳಗಳ ಚಟುವಟಿಕೆಗಳು, ತರಬೇತಿ ಕಾರ್ಯಕ್ರಮಗಳು ನಮ್ಮ ಸಂಸ್ಥೆಯ ಚಟುವಟಿಕೆಗಳ ತಿರುಳುಭಾಗವೆಂಬುದು ನಮ್ಮ ನೆನಪಿನಲ್ಲಿ ಇಟ್ಟುಕೊಳ್ಳಬೇಕು.



ಜೂನ್ 5ರಂದು ನಾವೆಲ್ಲರೂ ಅತ್ಯಂತ ಉತ್ಸಾಹದಿಂದ "ವಿಶ್ವ ಪರಿಸರ ದಿನಾಚರಣೆ"ಯನ್ನು ಆಚರಿಸಿದೆವು. ಸದ್ಯಕ್ಕೆ ನಮಗಿರುವುದು ಒಂದೇ ಭೂಮಿ. ಕೋಟ್ಯಂತರ ವರ್ಷಗಳಿಂದ ಮನುಷ್ಯನೂ ಸೇರಿದಂತೆ, ಸಕಲ ಚರಾಚರಗಳಿಗೂ ಭೂಮಿ ತವರುಮನೆಯಾಗಿದೆ. 1973ರಲ್ಲಿ ವಿಶ್ವ ಸಂಸ್ಥೆಯು ಜೂನ್ 5ನ್ನು "ವಿಶ್ವ ಪರಿಸರ ದಿನವನ್ನಾಗಿ" ಘೋಷಿಸಿತು. ಪ್ರತಿ ವರ್ಷವೂ ವಿಶ್ವ ಸಂಸ್ಥೆಯು ಈ ದಿನಕ್ಕೆ ನಿರ್ದಿಷ್ಟ ಧ್ಯೇಯೋದ್ದೇಶವನ್ನು ನೀಡುತ್ತದೆ. ಹಾಗೆಯೇ 2017ರ ಪರಿಸರ ದಿನಕ್ಕೆ "ಧ್ರುವದಿಂದ ಭೂಮಧ್ಯ ರೇಖೆಯವರೆಗೆ ಭೂಮಿ ಮತ್ತು ಪ್ರಕೃತಿಯೊಂದಿಗೆ ಜನರ ಸಂಯೋಜನೆ" ಎಂಬುದು ಧ್ಯೇಯವಾಗಿದೆ.

ವಿಜ್ಞಾನದ ಆವಿಷ್ಕಾರಗಳು ವೇಗವನ್ನು ಪಡೆದುಕೊಳ್ಳುತ್ತಿರುವಂತೆ, ಮನುಷ್ಯ ಪರಿಸರವನ್ನು ತನ್ನ ಸುಖಕ್ಕಾಗಿ ಅತಿಯಾಗಿ ಬಳಸಿಕೊಳ್ಳತೊಡಗಿದ್ದಾನೆ. ಕಾಡು ನಾಶವಾಗುತ್ತಿದೆ. ಸಸ್ಯ ಮತ್ತು ಪ್ರಾಣಿ ಸಂಕುಲಗಳು ನಾಶವಾಗುತ್ತಿದೆ. ಆಹಾರ ಸರಪಳಿ ಮುರಿದು ಜಾಗತಿಕ ತಾಪಮಾನ ಏರುತ್ತಿದೆ. ಮಳೆ, ಬಿಸಿಲುಗಳು ಸೇರಿದಂತೆ, ಹವಾಮಾನದಲ್ಲಿ ಏರುಪೇರಾಗುತ್ತಿದೆ. ನಾವೀಗ ಅಪಾಯಕ್ಕೆ ಆಹ್ವಾನವನ್ನು ಕೊಟ್ಟಿದ್ದೇವೆ. ಹಿಂದೆ ಕಾಣದ ಬರ, ಪ್ರವಾಹ, ಖಾಯಿಲೆ-ಕಸಾಲೆಗಳು ಪರಿಸರದ ಏರುಪೇರು ಕಾಣುತ್ತಿದ್ದೇವೆ.

ನಾವೀಗ ಜಾಗೃತರಾಗಬೇಕು. ಶುದ್ಧ ಪರಿಸರವನ್ನು ಮುಂದಿನ ಜನಾಂಗಗಳ ಉಳಿವಿಗಾಗಿ ರೂಪಿಸಬೇಕು. ಮರ-ಗಿಡಗಳನ್ನು ಹೊಸದಾಗಿ ನೆಡಬೇಕು. ಇರುವುದನ್ನು ಕಾಪಾಡಿಕೊಳ್ಳಬೇಕು. ನೀರು ಹಾಳಾಗದಂತೆ ನೋಡಿಕೊಳ್ಳಬೇಕು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯು ಈ ದಿಕ್ಕಿನಲ್ಲಿ ಜನಜಾಗೃತಿಯನ್ನುಂಟುಮಾಡಲು ಅಪಾರ ಕಾರ್ಯಕ್ರಮಗಳನ್ನು ಈಗಾಗಲೇ ನಡೆಸುತ್ತಿದೆ. "ನೀರು ಉಳಿಸಿ – ಬೆಂಗಳೂರು ಉಳಿಸಿ" ಎಂಬುದು ಜನಪ್ರಿಯ ಕಾರ್ಯಕ್ರಮವಾಗಿದೆ. ಸಂತೋಷದ ವಿಷಯವೆಂದರೆ, ಜೂನ್ 5ರಂದು ಕರ್ನಾಟಕದ ಮೂಲೆ, ಮೂಲೆಗಳಲ್ಲಿ ನೀವೆಲ್ಲರೂ ಬಹಳ ಖುಷಿಯಿಂದ ಪರಿಸರ ರಕ್ಷಣೆಯ ಕಾರ್ಯಕ್ರಮಗಳನ್ನು ನಡೆಸಿದಿರಿ. ಸಹಸ್ರಾರು ಸ್ಕೌಟ್ ಗೈಡ್‌ಗಳು

ಇದರಲ್ಲಿ ಭಾಗವಹಿಸಿದ್ದರು. ಎಲ್ಲಾ ಜಿಲ್ಲೆಗಳಿಂದ, ಸ್ಥಳೀಯ ಸಂಸ್ಥೆಗಳಿಂದ ಬಂದಿರುವ ವರದಿಗಳು ಒಂದು ರೀತಿಯ ಸಮಾಧಾನವನ್ನು ನೀಡುತ್ತಿವೆ. ಪರಿಸರ ರಕ್ಷಣೆಯು ಒಂದು ದಿನದ ಕಾಳಜಿಯಲ್ಲ. ಅದು ಪ್ರಚಾರಕ್ಕಂತೂ ಖಂಡಿತಾ ಅಲ್ಲ. ಮನುಕುಲದ ಉಸಿರೇ ಆಗಿರುವ ಪರಿಸರ ರಕ್ಷಣೆಯು ಪ್ರತಿದಿನದ ಕಾರ್ಯಕ್ರಮವಾಗಲಿ ಎಂಬುದು ನನ್ನ ಆಶಯ.




ಜೂನ್ ತಿಂಗಳಲ್ಲಿ ಮತ್ತೊಂದು ಪ್ರಮುಖ ಕಾರ್ಯಕ್ರಮವೆಂದರೆ 21ನೇ ತಾರೀಖಿನ "ಅಂತರರಾಷ್ಟ್ರೀಯ ಯೋಗ ದಿನ". ಪ್ರಧಾನಮಂತ್ರಿ ಶ್ರೀ ನರೇಂದ್ರಮೋದಿರವರ ಕರೆಯಂತೆ, ವಿಶ್ವ ಸಂಸ್ಥೆಯು ಡಿಸೆಂಬರ್ 2014ರಂದು ಜೂನ್ 21ನ್ನು ಅಂತರರಾಷ್ಟ್ರೀಯ ಯೋಗದಿನವನ್ನಾಗಿ ಘೋಷಿಸಿತು. ವಿಶ್ವ ಸಂಸ್ಥೆಯ ಮಹಾಧಿವೇಶನದಲ್ಲಿ ಕೆಳಕಂಡ ಅಂಶಗಳನ್ನು ಸನ್ಮಾನ್ಯ ಪ್ರಧಾನಮಂತ್ರಿಯವರು ತಮ್ಮ ಭಾಷಣದಲ್ಲಿ ಹೇಳಿದರು. "ಭಾರತದ ಪುರಾತನ ಸಂಪ್ರದಾಯವಾದ ಯೋಗವು ವಿಶ್ವಕ್ಕೆ ಭಾರತವು ನೀಡಿರುವ ಬೆಲೆಕಟ್ಟಲಾಗದ ಉಡುಗೊರೆಯಾಗಿದೆ. ದೇಹ-ಮನಸ್ಸು, ಚಿಂತನೆ ಮತ್ತು ಚಟುವಟಿಕೆಗಳ ಏಕತೆ; ಸಂಯಮ ಮತ್ತು ತೃಪ್ತಿ; ಮನುಷ್ಯ ಮತ್ತು ಪ್ರಕೃತಿಯ ನಡುವೆ ಸಮತೋಲನ; ಆರೋಗ್ಯ ಮತ್ತು ಆನಂದದ ಹೊಂದಾವಣಿಕೆ. ಯೋಗವು ಕೇವಲ ವ್ಯಾಯಾಮವನ್ನು ಮಾಡುವುದಲ್ಲ. ಬದಲಿಗೆ ಆತ್ಮವನ್ನು ಜಗತ್ತು ಮತ್ತು ಪರಿಸರದೊಂದಿಗೆ ಒಂದಾಗಿಸುವುದು. ನಮ್ಮ ಜೀವನ ಶೈಲಿಯನ್ನು ಬದಲಿಸಿಕೊಂಡು ಮನಸ್ಸನ್ನು ಜಾಗೃತಿಗೊಳಿಸಿ, ಹವಾಮಾನ ಬದಲಾವಣೆಯನ್ನು ಸರಿಪಡಿಸುವುದು".

ಜೂನ್ 21ರಂದು ಉತ್ತರ ಗೋಳಾರ್ಧದಲ್ಲಿ ವರ್ಷದ ದೀರ್ಘಹಗಲಾಗಿರುವುದರಿಂದ ಆ ದಿನವನ್ನು "ಅಂತರರಾಷ್ಟ್ರೀಯ ಯೋಗದಿನ"ವೆಂದು ಪರಿಗಣಿಸಲಾಯಿತು. ಈಗ ವಿಶ್ವ ಸಂಸ್ಥೆಯೂ ಸೇರಿದಂತೆ, 170 ರಾಷ್ಟ್ರಗಳಲ್ಲಿ ಅಂತರರಾಷ್ಟ್ರೀಯ ಯೋಗ ದಿನವನ್ನು ಆಚರಿಸಲಾಗುತ್ತಿದೆ.

ಬೆಂಗಳೂರಿನಲ್ಲಿ ಸಿದ್ಧಿಸಮಾಧಿಯೋಗದ ನಾಯಕರಾದ ಶ್ರೀ ಸತೀಶ್ ಗುರೂಜಿ ಮತ್ತು ಶ್ರೀಮತಿ ವೀಣಾ ಅವರ ಮುಂದಾಳತ್ವದಲ್ಲಿ ಶಾಂತಿಗೃಹದಲ್ಲಿ ಯೋಗದಿನಾಚರಣೆಯನ್ನು ನಡೆಸಲಾಯಿತು. ಕರ್ನಾಟಕದ ಎಲ್ಲಾ ಜಿಲ್ಲೆ, ಸ್ಥಳೀಯ ಸಂಸ್ಥೆಗಳಲ್ಲಿ ಯೋಗದಿನಾಚರಣೆಯ ಕಾರ್ಯಕ್ರಮಗಳು ನಡೆದಿರುವ ಬಗ್ಗೆ ವರದಿಗಳು ಬಂದಿವೆ. ಈ ಕಾರ್ಯಕ್ರಮಗಳಲ್ಲಿ ತೊಡಗಿಕೊಂಡ ಮಕ್ಕಳಿಗೆ ಮತ್ತು ನಾಯಕರುಗಳಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು. ಉತ್ಸಾಹಶೀಲತೆಯು ನಿರಂತರವಾಗಿರಲಿ ಎಂಬುದು ನನ್ನ ಆಶಯವಾಗಿದೆ.




ಇಂಟರ್‌ನ್ಯಾಷನಲ್ ಮೈಂಡ್ ಎಜುಕೇಷನ್ ಇನ್ಸ್‌ಟಿಟ್ಯೂಟ್‌ನ ಸಹಯೋಗದೊಂದಿಗೆ ಜೂನ್ 16ರಂದು ಒಂದು ದಿನದ ಕಾರ್ಯಕ್ರಮವನ್ನು ನಾವು ಏರ್ಪಡಿಸಿದ್ದೆವು. ಬುದ್ಧಿಶಕ್ತಿಯ ಸಂಪೂರ್ಣ ಪ್ರಯೋಜನವನ್ನು ಪಡೆಯುವುದಕ್ಕಾಗಿ ಅದನ್ನು ಅರ್ಥಮಾಡಿಕೊಂಡು, ತರಬೇತಿ ಪಡೆದು ಹೆಚ್ಚಿನ ಸಾಧನೆಯನ್ನು ಮಾಡುವುದು ಈ ತರಬೇತಿಯ ಉದ್ದೇಶ. ಒಂದು ದಿನದ ಕಾರ್ಯಕ್ರಮವು ಯಶಸ್ವಿಯಾಗಿದೆ ಎಂದು ನಾನು ಭಾವಿಸುತ್ತೇನೆ.

ಪ್ರತಿ ತಿಂಗಳಿನಂತೆ, ಈ ತಿಂಗಳು ನಾನು ಕೆಲವಾರು ಜಿಲ್ಲೆಗಳಿಗೆ ಭೇಟಿ ಕೊಟ್ಟಿದ್ದೇನೆ. ಸ್ಕೌಟಿಂಗ್ ಚಳವಳಿಯಲ್ಲಿ ಕ್ರಿಯಾಶೀಲವಾಗಿ ತೊಡಗಿಕೊಂಡಿದ್ದೇನೆ. ಮಕ್ಕಳೊಂದಿಗೆ ಬೆರೆಯುವುದು ನನಗೆ ಯಾವಾಗಲೂ ಸಂತೋಷವನ್ನು ಉಂಟುಮಾಡುತ್ತದೆ. ಅವರ ಮೂಲಕ ಸಂವೃದ್ಧ, ಸಮರ್ಥ ಭಾರತದ ಕನಸುಗಳು ನನ್ನದಾಗಿದೆ.

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

**"ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"**

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ

ರಾಜ್ಯ ಮುಖ್ಯ ಆಯುಕ್ತರು

## GOVERNOR PRESENTED COMMENDATION CERTIFICATES TO SENIOR SCOUT MASTER / GUIDE CAPTAINS




The Bharat Scouts and Guides, Karnataka organized a Felicitation Function to Honour the Senior Scout Masters and Guide Captains at Banquet Hall, Raj Bhavan on 27th June 2017.

Sri Vajubhai Vala, Hon'ble Governor of Karnataka and Patron, The Bharat Scouts and Guides, Karnataka Presented the Commendation Certificates to 132 Senior Scout Masters, Volunteers and Guide Captains for their sincere and valuable Services rendered to the Movement. They represented 33 Scout Guide Districts Associations of Karnataka.

The Governor also presented the Certificates to eight Best Local Associations and Five Best Open Units in the State and the APR Awardees of Guide Wing.

Sri P.G.R.Sindhia, State Chief Commissioner, The Bharat Scouts and Guides, Karnataka in his address thanked the Governor for graciously accepting to present the Certificates to the Senior Scout Masters and Guide Captains at the Banquet Hall. He gratefully thanked the Hon'ble Chief Minister, Government of Karnataka and the Departments of Public Instruction which supported for the growth and development of Scouting and Guiding in the State.

Sri Vajubhai Vala, The Hon'ble Governor in his address said that he was happy to present the Certificates to the Senior Scout Masters and Guide Captains and appreciated the multifarious activities conducted by the Bharat Scouts and Guides, Karnataka for the benefit



of the Scouts and Guides. He lauded the Social Service rendered by the Scouts, Guides, Rovers and Rangers of the Bharat Scouts and Guides calling them "true patriots" and serving Society barring the caste and age.

Earlier Smt Geetha Nataraj, State Commissioner (Guides) welcomed the Hon'ble Governor, Invitees, and the Awardees. Sri Chinnaswamy Reddy, State Secretary proposed the vote of thanks.

Sri Mohan Kumar Kondajji, Member of Karnataka Legislative Council & HQ Commissioners(S) (Project), Sri A.N. Mahesh, Chairman, Karnataka Jungle Lodges and Resorts Ltd, Sri Kondajji B. Shanmukhappa, Vice-President, Sri Prabhudeva J. Chigateri, State Treasurer, Smt. Shivaleela Chigateri, Smt. B.V. Ramalatha, ASC (G), Sri M.K. Khan, DCC & Smt. Uma Nagesh, DC(G) of Bengaluru South, Sri B.K. Seshadri, DA, Secretary of Bengaluru North District were Present.

Sri M.A. Chellaiah, Public Relations Officer, Bharat Scouts and Guides, Karnataka conducted the programme. Sri M. Prabhakar Bhat, Smt C. Manjula, State Organising Commissioners and Sri L.T. Lokesh, Smt. K.V. Shamala, State Training Commissioners assisted the programme.

## Observance of "World Day Against Child Labour"

### held at Vidhana Soudha on 12th June 2017 Scouts and Guides participated

The International Labour Organisation (ILO) launched the World Day Against Child Labour in 2002 to focus attention on the global extent of Child Labour and the action and efforts needed to eliminate it. Each year on 12th June, the World Day brings together governments, employers and workers, organizations, civil society, as well as millions of people from around the world to highlight the plight of child labourers and what can be done to help them.




The Department of Labour, Government of Karnataka organized the "World Day Against Child Labour" programme at Banquet Hall, Vidhana Soudha, Bengaluru on 12th June 2017.

Sri Ramalinga Reddy, Hon'ble Minister of Transport, Sri Santhosh S. Lad, Minister of Labour, Sri Amlan Aditya Biswas, I.A.S., Secretary to Government, Department of Labour, Sri R.R.Jannu, I.A.S., Commissioner for Labour and other senior Officials were present on the occasion.

Nearly 400 Scouts, Guides, Rovers and Rangers participated in the Programme. Sri M.A.Chellaiah, Public Relations Officer, Sri B.K. Sheshandri, District Secretary, Bengaluru North, Smt Kumari Honnamma, District Organisor(G), Unit Leaders from Bengaluru North and South District were present.

# ರಾಷ್ಟ್ರೀಯ ಮಟ್ಟದ ಶಿಕ್ಷಕರ ಸಮಾವೇಶ



ಮೇ 26 ರಿಂದ 28ರ ವರೆಗೆ ರಾಷ್ಟ್ರೀಯ ಮಟ್ಟದ ಶಿಕ್ಷಕರ ಸಮಾವೇಶವು ಶ್ರೀ ಸತ್ಯಸಾಯಿ ಎಜುಕೇಷನ್ ಟ್ರಸ್ಟ್ ವತಿಯಿಂದ, ಮುದ್ದೇನಹಳ್ಳಿ ಶ್ರೀ ಸತ್ಯಸಾಯಿ ಗ್ರಾಮದಲ್ಲಿ ಜರುಗಿತು. ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ವತಿಯಿಂದ 29 ಶಿಬಿರಾರ್ಥಿಗಳು, ರಾಜ್ಯದ ವಿವಿಧ ಭಾಗಗಳಿಂದ ಭಾಗವಹಿಸಿದ್ದರು.

ರಾಜ್ಯದ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರಾದ ಶ್ರೀ ತನ್ವೀರ್ ಶೇಠ್‌ರವರು ಜ್ಯೋತಿ ಬೆಳಗಿಸುವುದರ ಮೂಲಕ ಸಮಾವೇಶವನ್ನು ಉದ್ಘಾಟಿಸಿ ಮಾತನಾಡುತ್ತಾ ಇಂದಿನ ಶಿಕ್ಷಣದಲ್ಲಿ ವಿದ್ಯಾರ್ಥಿಗಳು **CBSC, ICSE,** ರಾಜ್ಯ ಮುಂತಾದ ಪಠ್ಯಕ್ರಮಗಳಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಶಿಕ್ಷಕರು ಹೊಸ ಹೊಸ ಬೋಧನ ವಿಧಾನಗಳನ್ನು ಅಳವಡಿಸಿಕೊಳ್ಳಬೇಕು ಎಂದು ತಿಳಿಸಿದರು.

ಶ್ರೀ ಆದಿಚುಂಚನಗಿರಿ ಮಠದ ಮಠಾಧೀಶರಾದ ಶ್ರೀ ಶ್ರೀ ನಿರ್ಮಲಾನಂದ ಸ್ವಾಮೀಜಿಯವರು ದಿವ್ಯ ಸಾನಿಧ್ಯ ವಹಿಸಿ ಮಾತನಾಡುತ್ತಾ ಅಧ್ಯಾಪಕರು ಆದರ್ಶರಾದರೆ ವಿದ್ಯಾರ್ಥಿಗಳು ಆದರ್ಶವಾಗುತ್ತಾರೆ. ವಿದ್ಯಾರ್ಥಿಗಳಿಗೆ ಆಧ್ಯಾತ್ಮಿಕ. ಜ್ಞಾನವನ್ನು ನೀಡುವ ಅವಶ್ಯಕತೆ ಇದೆ ಎಂದು ತಿಳಿಸಿದರು.

ಕರ್ನಾಟಕ ರಾಜ್ಯ ಸಭಾ ಸದಸ್ಯರಾದ ಶ್ರೀ ಬಸವರಾಜ ಸೇಡಂ ರವರು, ಪೋಷಕರು, ತಮ್ಮ ಮಕ್ಕಳು **MBBS, Engineering** ಮಾಡಬೇಕೆಂಬ ಆಸೆ ಬಿಟ್ಟು ಮಕ್ಕಳಿಗೆ ಬದುಕನ್ನು ಎದುರಿಸುವ ಶಿಕ್ಷಣ ನೀಡಬೇಕು. ಕನ್ನಡ ಭಾಷೆಗೆ ಪ್ರೋತ್ಸಾಹ ನೀಡಬೇಕು ಎಂದು ತಿಳಿಸಿದರು.

ರಾಜ್ಯ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ನರಸಿಂಹ ಮೂರ್ತಿ, ಸತ್ಯಸಾಯಿ ಟ್ರಸ್ಟ್‌ನ ಶ್ರೀ ಮಧುಸೂಧನ, ಸತ್ಯಸಾಯಿ ಆಡಳಿತ ಮಂಡಳಿ ಸದಸ್ಯರು ಉಪಸ್ಥಿತರಿದ್ದು ವಿವಿಧ ವಿಷಯಗಳ ಕುರಿತು ಮಾತನಾಡಿದರು.

ಸಮಾವೇಶದಲ್ಲಿ **Creative Teaching Technology** ಬಗ್ಗೆ ಡಾ॥ ಗುರುರಾಜ್ ಕರ್ಜಗಿ, **Morality and Spirituality in Education** ಬಗ್ಗೆ ಶ್ರೀ ಬಾಲಸುಬ್ರಹ್ಮಣ್ಯ ಮತ್ತು ಶ್ರೀ ಶ್ರೀ ಆತ್ಮ ಪ್ರಿಯಾನಂದ ರವರು ಮಾತನಾಡಿದರು. **Child Physiology** ಕುರಿತು ಶ್ರೀಮತಿ ಸುಧಾಕೃಪಾ, ಶ್ರೀ ಜಗದೀಶ್ ಸಿಂಗ್ ರವರು ಉಪನ್ಯಾಸ ನೀಡಿದರು.




ಮೇ 28 ರಂದು ಸಂಜೆ ಸಮಾವೇಶದ ಸಮಾರೋಪ ಸಮಾರಂಭ ನಡೆಯಿತು. ಶ್ರೀ ಫಾಲ್ ಚಾರ್ಲ್ಸ್, ಶ್ರೀ ನರಸಿಂಹಮೂರ್ತಿ, ಶ್ರೀ ಸಂಜೀವ ಶೆಟ್ಟಿ ಶ್ರೀ ಮಧುಸೂದನರವರು ಉಪಸ್ಥಿತರಿದ್ದರು. ವಿವಿಧ ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು.

# 3ನೇ ಅಂತರಾಷ್ಟ್ರೀಯ ಯೋಗ ದಿನಾಚರಣೆ



ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ಶ್ರೀ ಪ್ರಭಾಕರ ಗುರೂಜಿಯವರ ಋಷಿ ಸಂಸ್ಕೃತಿ ವಿದ್ಯಾಕೇಂದ್ರ ಇವರ ಸಹಕಾರದಲ್ಲಿ ಜೂನ್ 21 ರಂದು ಶಾಂತಿಗೃಹ ರಾಜ್ಯ ಕೇಂದ್ರ ಕಛೇರಿ, ಬೆಂಗಳೂರು ಇಲ್ಲಿ 3ನೇ ಅಂತರಾಷ್ಟ್ರೀಯ ಯೋಗ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಯೋಗ ದಿನಾಚರಣೆಯ ಮಹತ್ವವನ್ನು ತಿಳಿಸಿದರು.

ಶ್ರೀ ಸತೀಶ್ ಗುರೂಜಿ ಇವರು ಮುಖ್ಯ ಅತಿಥಿಗಳಾಗಿ ಯೋಗದ ಉಪಯೋಗಗಳನ್ನು ತಿಳಿಸಿದರು. ಋಷಿ ಸಂಸ್ಕೃತಿ ವಿದ್ಯಾಕೇಂದ್ರದ ಶ್ರೀ ದಯಾಕರ್, ಕುಮಾರಿ ಮೇಘನಾ, ಶ್ರೀಮತಿ ವೀಣಾ ಇವರುಗಳು ವಿದ್ಯಾರ್ಥಿಗಳಿಗೆ ಯೋಗ ತರಬೇತಿಯನ್ನು ನೀಡಿದರು. ಶ್ರೀ ರವೀಂದ್ರ ರೋವರ್ ಸ್ಕೌಟ್ ಲೀಡರ್ ಬೆಂಗಳೂರು ಉತ್ತರ, ಶ್ರೀಮತಿ ಬಿ.ವಿ. ರಾಮಲತಾ, ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್) ಶ್ರೀಮತಿ ಬಿ.ಡಿ. ಶಾಂತಾ ರಾಜ್ಯ ಸ್ಥಾನಿಕ ಆಯುಕ್ತರು (ಗೈಡ್ಸ್) ಇವರುಗಳು ಉಪಸ್ಥಿತರಿದ್ದರು. ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಗಳಿಂದ ಸುಮಾರು 300 ಸ್ಕೌಟ್ಸ್-ಗೈಡ್ಸ್, ರೋವರ-ರೇಂಜರ್, ಸ್ಕೌಟರ್ಸ್-ಗೈಡರ್ಸ್ ಹಾಗೂ ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



# ಅಭಿನಂದನೆಗಳು



राष्ट्रीय शैक्षिक योजना एवं प्रशासन विश्वविद्यालय, नई दिल्ली
National University of Educational Planning and Administration, New Delhi
(Declared by the Government of India under Section 3 of the UGC Act, 1956)

शैक्षिक प्रशासन में नवाचार -- 2016-17
Innovations in Educational Administration – 2016-17

राष्ट्रीय पुरस्कार
National Award

शैक्षिक प्रशासन में नवाचार के लिए प्रदान किया जाता है
Given in recognition of Innovations in Educational Administration

टी. अस्वथा रेड्डी
T. Aswatha Reddy
उप निदेशक लोक शिक्षण
Deputy Director of Public Instruction
चिक्कबल्लपुर जिला
Chikkaballapur District
कर्नाटक
Karnataka

7 मार्च 2017, नई दिल्ली
7 March 2017, New Delhi

जंध्याला बी. जी. तिलक
Jandhyala B. G. Tilak
कुलपति (प्रभारी)
Vice-Chancellor (I/c)

– ರಾಜ್ಯ ಕಾರ್ಯದರ್ಶಿ

# ಜಿಲ್ಲಾ ವಾರ್ತೆಗಳು

## ಬೆಂಗಳೂರು ದಕ್ಷಿಣ



ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಆನೇಕಲ್‌ನ ಭಗತ್ ಸಿಂಗ್ ಓಪನ್ ರೋವರ್ ತಂಡ ಹಾಗೂ ರಾಣೀ ಚೆನ್ನಮ್ಮ ಓಪನ್ ರೇಂಜರ್ ತಂಡಗಳು ಸಸಿ ನೆಡುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು.

ಕಾರ್ಯಕ್ರಮವನ್ನು ಉದ್ಘಾಟಿಸಿದ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಮಾತನಾಡಿ, ಪರಿಸರ ಮಾಲಿನ್ಯ ಕೇವಲ ಒಂದು ಪ್ರಾಂತ್ಯಕ್ಕೆ ಸೀಮಿತವಾದ ಅಪಾಯ ಅಲ್ಲ, ಬದಲಿಗೆ ಅದು ಇಡೀ ವಿಶ್ವಕ್ಕೇ ಮಾರಕ. ಕೈಗಾರಿಕಾ ಕ್ರಾಂತಿ, ಜಾಗತೀಕರಣ ಮತ್ತು ಅಭಿವೃದ್ಧಿಯ ಕಾರಣಗಳಿಂದ ನಮ್ಮ ಪರಿಸರದ ಮೇಲೆ ವ್ಯತಿರಿಕ್ತ ಪರಿಣಾಮಗಳು ಉಂಟಾಗುತ್ತಿದೆ. ಅದಕ್ಕೆ ಪರ್ಯಾಯವಾಗಿ ಪರಿಸರವನ್ನು ರಕ್ಷಿಸುವ ಹೊಣೆಗಾರಿಕೆ ಅದೇ ಕೈಗಾರಿಕೆಗಳು ಮತ್ತು ಸರ್ಕಾರ ಹೊರಬೇಕಾಗಿದೆ. ಅಲ್ಲದೆ ಪ್ರತಿಯೋರ್ವ ನಾಗರೀಕನೂ ಸಹ ಪರಿಸರ ಕಾಳಜಿಯನ್ನು ತೋರುವ ಪೃಥ್ವಿಯ ರಕ್ಷಣೆಗೆ ಮುಂದಾಗಬೇಕಿದೆ ಎಂದರು.

## ಬೆಳಗಾವಿ

ಗೋಕಾಕದ ಕೆ.ಎಲ್.ಇ. ಶಾಲೆಯ ಶ್ರೀ ಬಸವೇಶ್ವರ ಸ್ಕೌಟ್ ತಂಡ, ಫ್ಲೋರೆನ್ಸ್ ನೈಟಿಂಗೇಲ್ ಗೈಡ್ಸ್ ತಂಡ, ರಾಣಿ ಅಬ್ಬಕ್ಕ, ರಾಣಿ ಚನ್ನಮ್ಮಾ ಫ್ಲಾಕ್, ಸ್ವಾಮಿ ವಿವೇಕಾನಂದ ಕಬ್ ಪ್ಯಾಕ್ ಹಾಗೂ ಶಾಲೆಯ ಸರ್ವ ಸದಸ್ಯರುಗಳು ಶ್ರೀಮತಿ ಎಸ್.ಕೆ. ಪ್ರಭಾರವರ ನಿಧನಕ್ಕೆ ಸಂತಾಪ ಸೂಚಿಸಿದ್ದಾರೆ.

## ಚಾಮರಾಜನಗರ

ಜೂನ್ 5 ರಂದು ವಿಶ್ವ ಪರಿಸರ ದಿನಾಚರಣೆ ಆಚರಿಸಲಾಯಿತು. ಅದರ ಅಂಗವಾಗಿ ಹಮ್ಮಿಕೊಂಡಿದ್ದ ಜಾಥಾವನ್ನು ಸಿವಿಲ್ ನ್ಯಾಯಾಧೀಶರು ಹಾಗು ಮುಖ್ಯ ನ್ಯಾಯ ದಂಡಾಧಿಕಾರಿಗಳಾದ ಶ್ರೀ ಆರ್.ಪಿ. ನಂದೀಶ ರವರು ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ ಚಿತ್ರಕಲಾ ಸ್ಪರ್ಧೆಯನ್ನು ಸಹ ಏರ್ಪಡಿಸಲಾಗಿತ್ತು.



* ಜೂನ್ 5 ರಂದು ಬೆಳಗ್ಗೆ 11.00 ಗಂಟೆಗೆ ಜಿಲ್ಲಾಡಳಿತ ಭವನದಲ್ಲಿರುವ ಜೆ.ಹೆಚ್. ಸಭಾಂಗಣದಲ್ಲಿ ಪರಿಸರ ದಿನಾಚರಣೆ ಕಾರ್ಯಕ್ರಮ ಜರುಗಿತು. ಸಸಿಗೆ ನೀರೆರೆವುದರ ಮೂಲಕ ಶ್ರೀ ಬಿ. ರಾಮು ಭಾ.ಆ.ಸೇ., ಜಿಲ್ಲಾಧಿಕಾರಿಗಳು ಉದ್ಘಾಟಿಸಿದರು. ಶ್ರೀ ಡಾ. ಎಂ.ಪಿ. ರಾಘವೇಂದ್ರ, ಸಹಾಯಕ ಪ್ರಾಧ್ಯಾಪಕರು, ಮಹಾರಾಣಿ ಕಾಲೇಜು, ಮೈಸೂರು ಇವರು ಪರಿಸರ ಮಾಲಿನ್ಯದ ಬಗ್ಗೆ ವಿಷಯ ಪ್ರಸ್ತುತ ಪಡಿಸಿದರು.



ಶ್ರೀ ಡಾ. ಹರೀಶ್ ಕುಮಾರ್, ಮುಖ್ಯಕಾರ್ಯನಿರ್ವಾಹಕ ಅಧಿಕಾರಿಗಳು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಎಸ್.ಎಸ್. ಲಿಂಗರಾಜ, ಭಾ.ಆ.ಸೇ, ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ನಿರ್ದೇಶಕರು ಹುಲಿ ಸಂರಕ್ಷಿತ ಪ್ರದೇಶ, ಬಿ.ಆರ್.ಟಿ. ಶ್ರೀ ನಾಗರಾಜು ಕ.ಅ.ಸೇ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು (ಸಾಮಾಜಿಕ ಅರಣ್ಯ), ಶ್ರೀಮತಿ ಮಂಜುಳಾ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಡಾ. ಆನಂದ್ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಶ್ರೀ ವಿ.ಎಂ. ರಾಮಚಂದ್ರ ಜಿಲ್ಲಾ ಕಾರ್ಯದರ್ಶಿ ಭಾರತ್ ಸ್ಕೌಟ್ಸ್-ಗೈಡ್ಸ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಶ್ರೀ ಬಿ.ಎಂ. ಪ್ರಕಾಶ್ ಪರಿಸರ ಅಧಿಕಾರಿಗಳು ಕಾರ್ಯಕ್ರಮ ವ್ಯವಸ್ಥೆ ಮಾಡಿದರು. ಪರಿಸರದ ಬಗ್ಗೆ ವಿವಿಧ ಶಾಲೆ ವಿದ್ಯಾರ್ಥಿಗಳಿಗೆ ಚಿತ್ರಕಲೆ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಪ್ರಶಸ್ತಿ ಪತ್ರ ಹಾಗೂ ಸ್ಮರಣಿಕೆ ವಿತರಿಸಿದರು.

* ಜೂನ್ 14 ಹನೂರು, ಜೂನ್ 15 ಕೊಳ್ಳೆಗಾಲ, ಜೂನ್ 16 ಯಳಂದೂರು, ಜೂನ್ 19 ಚಾಮರಾಜನಗರ, ಜೂನ್ 20 ರಂದು ಗುಂಡ್ಲುಪೇಟೆ ಸ್ಥಳೀಯ ಸಂಸ್ಥೆಗಳಲ್ಲಿ ವಿಶ್ವ ಜಲ ದಿನಾಚರಣೆ/ಪರಿಸರ ಮಾಲಿನ್ಯ ನಿಯಂತ್ರಣ ಮತ್ತು ಶ್ರೀಮತಿ ಎಸ್.ಕೆ. ಪ್ರಭಾ ರಾಜ್ಯ ಜಂಟಿ ಕಾರ್ಯದರ್ಶಿಯವರಿಗೆ ಶ್ರದ್ಧಾಂಜಲಿ ಕಾಯಕ್ರಮ ಹಮ್ಮಿಕೊಳ್ಳಲಾಗಿತ್ತು.

* ಜೂನ್ 21 ರಂದು ಪೋಲೀಸ್ ಕವಾಯಿತು ಮೈದಾನ ಚಾಮರಾಜ ನಗರದಲ್ಲಿ ಜಿಲ್ಲಾ ಮಟ್ಟದ ವಿಶ್ವಯೋಗ ದಿನಾಚರಣೆಯಲ್ಲಿ ಸ್ಕೌಟ್ಸ್-ಗೈಡ್ಸ್, ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್ ರವರುಗಳು ಭಾಗವಹಿಸಿದ್ದರು.

## ಚಿತ್ರದುರ್ಗ

ಭಾರತ್ ಸ್ಕೌಟ್ಸ್-ಗೈಡ್ಸ್ ಚಿತ್ರದುರ್ಗ ಸ್ಥಳೀಯ ಸಂಸ್ಥೆ ವತಿಯಿಂದ ಎಸ್ಆರ್ಎಸ್ ಪಿ ಯು ಕಾಲೇಜಿನ ಹದಿನೈದು ರೋವರ್ಸ್‌ಗಳಿಗೆ ಏಳು ದಿನಗಳ ಕಾಲ ತರಬೇತಿ ನೀಡಲಾಗಿದ್ದು ಈ ಸಂಬಂಧ ಭಾನುವಾರ ಕೋಟೆ ಮುಂಭಾಗವಿರುವ ಮಹಾರಾಣಿ ಕಾಲೇಜಿನಲ್ಲಿ ಸಮಾರೋಪ ನಡೆಯಿತು.



ಗೈಡ್ಸ್ ಜಿಲ್ಲಾ ಆಯುಕ್ತೆ ಶ್ರೀಮತಿ ಸುನಿತಾ ಮಲ್ಲಿಕಾರ್ಜುನ್ ಮಾತನಾಡಿ ಶಿಸ್ತು ಬದ್ಧ ಜೀವನಕ್ಕೆ ತರಬೇತಿ ಬುನಾದಿಯಾಗಲಿದೆ. ಏಳು ದಿನಗಳ ಕಾಲ ರೋವರ್ಸ್ ತರಬೇತಿ ಪಡೆದು ರಾಷ್ಟ್ರಪತಿ ಪದಕ ಪಡೆದುಕೊಂಡರೆ ಉನ್ನತ ಶಿಕ್ಷಣದಲ್ಲಿ ಮೀಸಲಾತಿ ಸಿಗುತ್ತದೆ. ರಾಜ್ಯಮಟ್ಟದ ತರಬೇತಿಯನ್ನು ಶ್ರದ್ಧೆಯಿಂದ ಕಲಿತು ಜಿಲ್ಲೆಗೆ ಕೀರ್ತಿ ತನ್ನಿ ಎಂದು ಹಾರೈಸಿದರು. ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಪಿ.ವೈ. ದೇವರಾಜ್ ಪ್ರಸಾದ್ ಮಾತನಾಡಿ ಜಿಲ್ಲೆಯ ಯಾವ ಶಾಲಾ-ಕಾಲೇಜನಲ್ಲಿಯೂ ರೋವರ್ಸ್ ತಂಡ ಇಲ್ಲ. ಇದು ಮೊದಲನೆ ತಂಡವಾಗಿದೆ ಎಂದರು. ಮಂಗಳೂರಿನ ಶ್ರೀ ಪ್ರೀತೇಶ್ ಬಂಗೇರ್ ಚಿತ್ರದುರ್ಗಕ್ಕೆ ಆಗಮಿಸಿ ಏಳು ದಿನಗಳ ರೋವರ್ಸ್ ವಿದ್ಯಾರ್ಥಿಗಳಿಗೆ ತರಬೇತಿ ನೀಡಿರುವುದಕ್ಕೆ ಪ್ರಶಂಸೆ ವ್ಯಕ್ತಪಡಿಸಿದರು. ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಹುಟ್ಟು ಮತ್ತು ಬೆಳವಣಿಗೆ, ಸಾಹಸಪ್ರವೃತ್ತಿ, ಶಿಸ್ತು, ದೇಶಭಕ್ತಿ, ಕೌಶಲ್ಯ ಶಿಕ್ಷಣವನ್ನು ನೀಡಲಾಗಿದೆ. ಇಲ್ಲಿ ತರಬೇತಿ ಪಡೆದ ನೀವುಗಳೆಲ್ಲರೂ ರಾಷ್ಟ್ರಪತಿ ಪದಕಕ್ಕೆ ತಯಾರಿ ನಡೆಸಿ ಇದರಿಂದ ಉನ್ನತ ಶಿಕ್ಷಣದಲ್ಲಿ ಮೀಸಲಾತಿ ಸಿಗುತ್ತದೆ ಎಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷ ಶ್ರೀ ಆರ್. ಉದಯಶಂಕರ್ ಮಾತನಾಡಿ ರೋವರ್ಸ್ ತರಬೇತಿಯಿಂದ ನಾಯಕತ್ವದ ಗುಣ ಬೆಳೆಯುವುದರ ಜೊತೆಗೆ ಶಿಸ್ತು ಮೂಡಿಸಿಕೊಳ್ಳಲು ಸಹಕಾರಿಯಾಗಲಿದೆ ಎಂದರು. ಮಂಗಳೂರಿನಿಂದ ಆಗಮಿಸಿ ತರಬೇತಿ ನೀಡಿದ ಶ್ರೀ ಪ್ರೀತೇಶ್ ಬಂಗೇರ್, ಉಪಾಧ್ಯಕ್ಷ ಶ್ರೀ ಚಲ್ಮೇಶ್, ಶಿಕ್ಷಕ ಶ್ರೀ ವಿಶ್ವನಾಥ್ ವೇದಿಕೆಯಲ್ಲಿದ್ದರು.

* ಮೇ 30 ರಂದು ಶ್ರೀಮತಿ ಎಸ್.ಕೆ. ಪ್ರಭಾರವರು ದೈವಾಧೀನರಾದ ಪ್ರಯುಕ್ತ ಚಿತ್ರದುರ್ಗ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಶ್ರದ್ಧಾಂಜಲಿ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ. ರೇವಣಸಿದ್ದಪ್ಪ, ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್ ಜಿಲ್ಲಾ ಗೈಡ್ಸ್ ಆಯುಕ್ತರು, ಶ್ರೀ ಬಿ.ಎ. ಲಿಂಗಾರೆಡ್ಡಿ, ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ರೀನಾವೀರಭದ್ರಪ್ಪ, ಜಿಲ್ಲಾ ಜಂಟಿ ಕಾರ್ಯದರ್ಶಿಗಳು, ಶ್ರೀ ಸಿ.ಆರ್. ಮೋಹಿನುದ್ದೀನ್, ಜಿಲ್ಲಾ ಸ್ಥಾನಿಕ ಆಯುಕ್ತರು, (ಸ್ಕೌಟ್), ಶ್ರೀ ಬಿ. ಗುರುಮೂರ್ತಿ, ಶ್ರೀ ಟಿ. ಕರಿಸಿದ್ದಪ್ಪ, ಹಾಗೂ ಇತರೆ ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.



## ಚಿಕ್ಕಮಗಳೂರು

ಮೇ 30 ರಂದು ಗೈಡ್ ವಿಭಾಗದ ಲೀಡರ್ ಟ್ರೈನರ್ ಆದ ಶ್ರೀಮತಿ ಎಸ್.ಕೆ. ಪ್ರಭಾರವರು ನಿಧನರಾದ ಪ್ರಯುಕ್ತ ಚಿಕ್ಕಮಗಳೂರಿನ ಜಿಲ್ಲಾ ಸಂಸ್ಥೆ ವತಿಯಿಂದ ಶ್ರದ್ಧಾಂಜಲಿ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಸಭೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿ, ಕಾರ್ಯದರ್ಶಿ ಶ್ರೀ ಶಶಿಧರರಾವ್, ಶ್ರೀಮತಿ ಸಂಧ್ಯಾ ರಾಣಿ, ಶ್ರೀ ನೀಲಕಂಠಾಚಾರ್, ಶ್ರೀ ಹೊನ್ನೇಗೌಡ, ಶ್ರೀ ರಾಘವೇಂದ್ರ, ಶಿಕ್ಷಣ ಇಲಾಖೆಯ ಶ್ರೀ ಮಹೇಶ್, ಡಾ|| ಗಣೇಶ್, ಶ್ರೀ ಹೆಚ್. ಎಂ ಗಂಗಾಧರ ಜಿಲ್ಲಾ ಸಂಘಟಕ ಶ್ರೀ ಬಿ.ಎನ್. ಕಿರಣ್‌ಕುಮಾರ್ ಮುಂತಾದವರು ಉಪಸ್ಥಿತರಿದ್ದರು.

* ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು. ಹಾಗಾಗಿ ಪರಿಸರದ ಬಗ್ಗೆ ಕಾಳಜಿ ಬೆಳೆಸಿಕೊಂಡರೆ, ನಮ್ಮ ಮತ್ತು ಸಮಾಜದ ಅಭಿವೃದ್ಧಿ ಸಾಧ್ಯ.ಮನುಷ್ಯ ವಾಸಮಾಡಲು ಭೂಮಿ ಬಿಟ್ಟರೆ ಯೋಗ್ಯವಾದ ಗ್ರಹ ಬೇರೊಂದಿಲ್ಲ. ಹಾಗಾಗಿ ಈ ಭೂಮಿಯನ್ನು ಕಾಪಾಡುವ ಜವಾಬ್ದಾರಿ ನಮ್ಮೆಲ್ಲರದಾಗಿದೆ ಎಂದು ಚಿಕ್ಕಮಗಳೂರಿನ ಮಾಡೆಲ್ ಶಾಲೆಯಲ್ಲಿ ಹಮ್ಮಿಕೊಂಡಿದ್ದ ಪರಿಸರ ದಿನಾಚರಣೆ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಅಮ್ಜದ್ ರವರು ಮಾತನಾಡಿದರು.



ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶಾಲಾ ಮುಖ್ಯಸ್ಥ ಶ್ರೀ ಎಂ.ಎನ್. ಷಡಕ್ಷರಿ ಮಾತನಾಡಿ, ಕೇವಲ ಪರಿಸರ ದಿನವು, ಈ ದಿನಕ್ಕೆ ಮಾತ್ರ ಸೀಮಿವಾಗಿರದೆ ಪ್ರತಿದಿನವೂ ಪರಿಸರ ದಿನವಾಗಬೇಕು. ನಾವೆಲ್ಲರೂ ಪರಿಸರ ಸಂರಕ್ಷಣೆಯ ಬಗ್ಗೆ ಕಾಳಜಿ ವಹಿಸಬೇಕು. ಪರಿಸರವನ್ನು ಸ್ವಚ್ಛವಾಗಿಡುವುದರಲ್ಲಿ ನನ್ನ ಪಾತ್ರವೇನು ಎನ್ನುವುದನ್ನು ಅರಿತುಕೊಳ್ಳಬೇಕು ಎಂದರು. ಈ ಕಾರ್ಯಕ್ರಮದಲ್ಲಿ ಶ್ರೀಮತಿ ವಿಶಾಲ ಷಡಕ್ಷರಿ, ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಅಬ್ದುಲ್ ಮಲ್ಲಿಕ್ ಹಾಗೂ ಶಾಲೆಯ ಎಲ್ಲಾ ಬೋಧಕ ವರ್ಗದವರು ಉಪಸ್ಥಿತರಿದ್ದರು.

## ಚಿಕ್ಕಬಳ್ಳಾಪುರ

ಜೂನ್ 5 ರಂದು ಗೌರಿಬಿದನೂರಿನಲ್ಲಿ "ಹಸಿರಾಗಿಸೋಣ ನಮ್ಮೂರು" ಎಂಬ ಧ್ಯೇಯದೊಂದಿಗೆ ಪ್ರತಿವಾರ್ಡ್ ಗಳಲ್ಲಿ ಗಿಡ ನೆಡುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮವನ್ನು ಮಾನ್ಯ ವಿಧಾನ ಸಭಾ ಉಪಾಧ್ಯಕ್ಷರಾದ ಶ್ರೀ ಎನ್. ಎಚ್. ಶಿವಶಂಕರರೆಡ್ಡಿ ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಶಿಕ್ಷಣ ಇಲಾಖೆ, ಅರಣ್ಯ ಇಲಾಖೆ, ಸ್ಥಳೀಯ ಪುರಸಭೆಯ ಅಧಿಕಾರಿಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಚಿಕ್ಕಬಳ್ಳಾಪುರ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ವತಿಯಿಂದ ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ ಆಗಮಿಸಿದ್ದ ರೋವರ್ಸ್, ರೇಂಜರ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿ ವಿಘ್ನೇಶ್ವರ ಬಡಾವಣೆಯಲ್ಲಿ ಸುಮಾರು 900 ಕ್ಕೂ ಹೆಚ್ಚಿನ ಗಿಡ ನೆಡಲಾಯಿತು. ಅಂದು ಒಟ್ಟು ಸುಮಾರು 8000 ಗಿಡಗಳನ್ನು ಗೌರಿಬಿದನೂರಿನ ವಿವಿಧ ಬಡಾವಣೆಗಳಲ್ಲಿ ನೆಡಲಾಯಿತು.



* ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಚಿಕ್ಕಬಳ್ಳಾಪುರ ಹಾಗೂ ಸ್ಥಳೀಯ ಸಂಸ್ಥೆ, ಗುಡಿಬಂಡೆ, ಇವರ ಸಂಯುಕ್ತಾಶ್ರಯದಲ್ಲಿ "ರೋವರ್ಸ್" ಸಮುದಾಯ ಸೇವಾ ಶಿಬಿರ, ಹಾಗೂ ಸಾಮೂಹಿಕ ಗಿಡ ನೆಡುವ ಕಾರ್ಯಕ್ರಮವನ್ನು ಗುಡಿಬಂಡೆ ಪಟ್ಟಣದ ಸುರಸದ್ಮಗಿರಿ ಬೆಟ್ಟದ ಮೇಲೆ ಜೂನ್ 6 ರಿಂದ 8 ರ ವರೆಗೆ ಆಯೋಜಿಸಲಾಗಿತ್ತು. ಈ ಸೇವಾ ಶಿಬಿರದಲ್ಲಿ ಜಿಲ್ಲೆಯ ಆಯ್ದ ಕಾಲೇಜುಗಳ 40 ರೋವರ್‌ಗಳು 3 ದಿನಗಳ ಕಾಲ ಬೆಟ್ಟದಲ್ಲಿರುವ ಕಲ್ಯಾಣಿಗಳ ಸ್ವಚ್ಚತೆ ದೇವಸ್ಥಾನ, ಸಾಲು ಮಂಟಪ, ಕೋಟೆಕೊತ್ತಲ ಇಕ್ಕೆಲಗಳಲ್ಲಿರುವ ಕಸವನ್ನು, ಸ್ವಚ್ಚಮಾಡಿ, ಪ್ಲಾಸ್ಟಿಕ್ ರಹಿತ ಪ್ರದೇಶವನ್ನಾಗಿಸಿದರು.

ಪ್ರವಾಸಿಗರ ತುಳಿತಕ್ಕೆ ಸುಮಾರು ಕಲ್ಲಿನ ಮಂಟಪಗಳು ಹಾಳಾಗಿದ್ದವು. ಅವುಗಳನ್ನು ನಿಲ್ಲಿಸಿ ಪರಿಸರ ರಕ್ಷಣೆ ನಮ್ಮೆಲ್ಲರ ಹೊಣೆ ಎಂಬ ವಾಕ್ಯದೊಡನೆ ಬೆಟ್ಟದಲ್ಲಿ 'ಸ್ವಚ್ಛ ಭಾರತ್' ದ ಸಂದೇಶವನ್ನು ಎತ್ತಿ ಹಿಡಿದಿದ್ದಾರೆ. ಈ ಶಿಬಿರದ ನಾಯಕತ್ವವನ್ನು ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಶಂಕರ್ ಎ.ಎಂ. ರವರು ವಹಿಸಿದ್ದರು. ಇವರಿಗೆ ಸಹಾಯಕರಾಗಿ ಶ್ರೀ ತಿಮ್ಮರಾಜು, ಹಾಗೂ ಶ್ರೀ ಆಂಜಿನಪ್ಪ ರವರು ಭಾಗವಹಿಸಿದ್ದರು.

## ದಕ್ಷಿಣ ಕನ್ನಡ

ಏಪ್ರಿಲ್ 26 ರಿಂದ ಮೇ 2ರ ವರೆಗೆ ಗೈಡ್ ಮುಂದುವರೆದ ತರಬೇತಿಯು ದ. ಕ. ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳ ಇಲ್ಲಿ ನಡೆಯಿತು. ಒಟ್ಟು 21 ಗೈಡ್ ಶಿಕ್ಷಕಿಯರು ಈ ತರಬೇತಿಯಲ್ಲಿ ಭಾಗವಹಿಸಿದ್ದರು. ಶ್ರೀಮತಿ ಶುಭ ವಿಶ್ವನಾಥ್ ಎ.ಎಲ್.ಟಿ.(ಗೈ) ನಾಯಕಿಯಾಗಿ ಕಾರ್ಯ ನಿರ್ವಹಿಸಿದರು.

* ಮೇ 11 ರಿಂದ 12 ರ ವರೆಗೆ ರಾಜ್ಯ ಪುರಸ್ಕಾರ ಸ್ಕೌಟ್ಸ್‌ಗಳಿಗೆ ಮಾಹಿತಿ ಶಿಬಿರವನ್ನು ಭಾರತ್ ಸ್ಕೌಟ್ಸ್-ಗೈಡ್ಸ್ ಭವನ. ಲಾಲ್‌ಭಾಗ್ ಮಂಗಳೂರಿನಲ್ಲಿ ನಡೆಸಲಾಯಿತು. ಈ ಶಿಬಿರದಲ್ಲಿ ಒಟ್ಟು 145 ಸ್ಕೌಟ್ಸ್ ಭಾಗವಹಿಸಿದ್ದರು. ಶಿಬಿರದ ನಾಯಕತ್ವವನ್ನು ಶ್ರೀ ಶಾಂತರಾಮ್ ಪ್ರಭು ಎ.ಎಲ್.ಟಿ.(ಸ್ಕೌ) ವಹಿಸಿದ್ದರು.

* ಮೇ 19 ರಿಂದ 20 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಲಾಲ್‌ಭಾಗ್, ಮಂಗಳೂರಿನಲ್ಲಿ ರಾಜ್ಯಪುರಸ್ಕಾರ ಗೈಡ್ಸ್‌ಗಳಿಗೆ ಮಾಹಿತಿ ಶಿಬಿರ ನಡೆಯಿತು. ಈ ಶಿಬಿರದಲ್ಲಿ ಒಟ್ಟು 180 ಗೈಡ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕತ್ವವನ್ನು ಶ್ರೀಮತಿ ಜಯಶ್ರೀ ಎಲ್.ಟಿ.(ಗೈಡ್) ವಹಿಸಿದ್ದರು.

* ಮೇ 25 ರಿಂದ 31 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ನಡೆಸಿದ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ಶಿಕ್ಷಕ-ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರದಲ್ಲಿ ವಿವಿಧ ಶಾಲೆಗಳಿಂದ ಕಬ್ಸ್ ವಿಭಾಗದಲ್ಲಿ 21 ಶಿಕ್ಷಕರು, ಫ್ಲಾಕ್ ವಿಭಾಗದಲ್ಲಿ 23 ಶಿಕ್ಷಕರು, ಸ್ಕೌಟ್ಸ್ ವಿಭಾಗದಲ್ಲಿ 38 ಶಿಕ್ಷಕರು ಹಾಗೇ ಗೈಡ್ಸ್ ವಿಭಾಗದಲ್ಲಿ 32 ಶಿಕ್ಷಕರು ಭಾಗವಹಿಸಿದ್ದರು.

ಕಬ್ಸ್ ವಿಭಾಗದಲ್ಲಿ ಶ್ರೀಮತಿ ರಾಧಮ್ಮ ಎಲ್.ಟಿ.(ಕಬ್), ಫ್ಲಾಕ್ ವಿಭಾಗದಲ್ಲಿ ಸಿಸ್ಟರ್ ಲೊರಿನ್ ಎ.ಎಲ್.ಟಿ.(ಫ್ಲಾ.) ಸ್ಕೌಟ್ಸ್ ವಿಭಾಗದಲ್ಲಿ ಶ್ರೀ ಮಹಮ್ಮದ್ ತುಂಬೆ ಎ.ಎಲ್.ಟಿ.(ಸ್ಕೌ), ಗೈಡ್ ವಿಭಾಗದಲ್ಲಿ ಶ್ರೀಮತಿ ಗೀತಾ ಜೆ. ಸಲ್ಡಾನ ಎ.ಎಲ್.ಟಿ.(ಗೈ) ರವರು ನಾಯಕತ್ವವನ್ನು ವಹಿಸಿದ್ದರು.

* ಜೂನ್ 4 ರಂದು ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ವನಮಹೋತ್ಸವ ಆಚರಣೆ ಮಾಡಲಾಯಿತು. ಈ ಕಾರ್ಯಕ್ರಮವನ್ನು ಪಿಲಿಕುಳ ನಿಸರ್ಗಧಾಮದ ಪ್ರಾದೇಶಿಕ ವಿಜ್ಞಾನ ಕೇಂದ್ರದ ನಿರ್ದೇಶಕರಾದ ಶ್ರೀ ಕೆ.ವಿ. ರಾವ್‌ರವರು ಗಿಡ ನೆಡುವುದರ ಮುಖಾಂತರ ಉದ್ಘಾಟನೆಯನ್ನು ಮಾಡಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಪ್ರತಿಮ್ ಕುಮಾರ್ ಎಲ್.ಟಿ.(ಸ್ಕೌ) ಶ್ರೀಮತಿ ಶುಭ ವಿಶ್ವನಾಥ್ ಎ.ಎಲ್.ಟಿ.(ಗೈ) ಹಾಗೂ ಜಿಲ್ಲೆಯ ವಿವಿಧ ಕಾಲೇಜಿನ ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಶ್ರೀ ಭರತ್ ರಾಜ್ ಕೆ. ಜಿಲ್ಲಾ ಸಂಘಟಕರು ಕಾರ್ಯಕ್ರಮವನ್ನು ನಿರ್ವಹಿಸಿದರು.



* ಜೂನ್ 3 ರಿಂದ 5 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ರಾಜ್ಯಪುರಸ್ಕಾರ ರೋವರ್ಸ್-ರೇಂಜರ್ಸ್ ಪೂರ್ವಸಿದ್ಧತಾ ಪರೀಕ್ಷಾ ಶಿಬಿರ ನಡೆಯಿತು. ಶಿಬಿರದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ಕಾಲೇಜಿನ ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ರೋವರ್ಸ್ ವಿಭಾಗದಲ್ಲಿ ಶ್ರೀ ಪ್ರತಿಮ್ ಕುಮಾರ್, ಹೆಚ್.ಡಬ್ಲ್ಯೂ.ಬಿ. (ರೋ) ಹಾಗೂ ರೇಂಜರ್ಸ್ ವಿಭಾಗದಲ್ಲಿ ಕುಮಾರಿ ದಿವ್ಯಾರವರು ನಾಯಕತ್ವವನ್ನು ವಹಿಸಿದ್ದರು.



* ಜೂನ್ 5 ರಂದು ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ವಿಶ್ವಪರಿಸರ ದಿನಾಚರಣೆಯನ್ನು ಆಚರಿಸಲಾಯಿತು. ಕಾರ್ಯಕ್ರಮವನ್ನು ಶ್ರೀ ವಾಸುದೇವ ಬೋಳೂರು, ಜಿಲ್ಲಾ ಕೋಶಾಧಿಕಾರಿಯವರು ದೀಪ ಬೆಳಗಿಸುವುದರ ಮೂಲಕ ಉದ್ಘಾಟನೆ ಮಾಡಿದರು. ವಿಶ್ವ ಪರಿಸರ ದಿನಾಚರಣೆಯ ಮಹತ್ವವನ್ನು ತಿಳಿಸಿದರು. ಕಾರ್ಯಕ್ರಮದಲ್ಲಿ ಅಧ್ಯಕ್ಷ ಸ್ಥಾನವನ್ನು ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಸ್ಕೌಟ್ ಆಯುಕ್ತರು ವಹಿಸಿದ್ದರು. ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಮೂಡುಶೆಡ್ಡ ಗ್ರಾಮಪಂಚಾಯತಿನ ಅಧ್ಯಕ್ಷರಾದ ಶ್ರೀ ಹರಿಪ್ರಸಾದ್‌ರವರು ಸಾಂಕೇತಿಕವಾಗಿ ಗಿಡನೆಟ್ಟರು.

## ದಾವಣಗೆರೆ

ಏಪ್ರಿಲ್ 15 ರಿಂದ 28 ರ ವರೆಗೆ ನೇತಾಜಿ ಓಪನ್ ಸ್ಕೌಟ್ ಗ್ರೂಪ್ ಹಾಗೂ ಚೇತನ ಗೈಡ್ ಕಂಪನಿ ವತಿಯಿಂದ ಅಂತರ ರಾಜ್ಯ ಭೇಟಿ ಮತ್ತು ಚಾರಣ ಶಿಬಿರವನ್ನು ಕೇರಳ ರಾಜ್ಯದಲ್ಲಿ ಆಯೋಜಿಸಲಾಗಿತ್ತು. ಸದರಿ ಶಿಬಿರದಲ್ಲಿ 48 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ನೇತಾಜಿ ಸ್ಕೌಟ್ ಗ್ರೂಪ್‌ನ ನಾಯಕರಾದ ಶ್ರೀ ಜೆ.ಎಸ್.ವಿಜಯ್, ಚೇತನ ಗೈಡ್ ಕಂಪನಿ ನಾಯಕಿಯಾದ ಕುಮಾರಿ ಮಧುಶ್ರೀ ಕಾರ್ಯನಿರ್ವಹಿಸಿದರು.

* ಏಪ್ರಿಲ್ 27 ರಿಂದ 30 ರ ವರೆಗೆ ಬಾಪೂಜಿ ಓಪನ್ ಸ್ಕೌಟ್ ಟ್ರೂಪ್ ಮತ್ತು ಮದರ್ ತೆರೆಸಾ ಓಪನ್ ಗೈಡ್ ಕಂಪನಿ ವತಿಯಿಂದ ಅಂತರ ರಾಜ್ಯ ಭೇಟಿ ಕಾರ್ಯಕ್ರಮವನ್ನು ರಾಷ್ಟ್ರ ರಾಜಧಾನಿ ನವದೆಹಲಿಯಲ್ಲಿ ಆಯೋಜಿಸಲಾಗಿತ್ತು. ಸದರಿ ಕಾರ್ಯಕ್ರಮದಲ್ಲಿ 93 ಸ್ಕೌಟ್ಸ್-ಗೈಡ್ಸ್‌ಗಳು ಸ್ಕೌಟರ್ಸ್-ಗೈಡರ್ಸ್‌ಗಳೊಂದಿಗೆ ಭಾಗವಹಿಸಿದ್ದರು. ಸದರಿ ಕಾರ್ಯಕ್ರಮದ ನೇತೃತ್ವವನ್ನು ಶ್ರೀ ರವೀಂದ್ರಸ್ವಾಮಿ ಟಿ.ಎಂ. ಸ್ಕೌಟ್ ಮಾಸ್ಟರ್ ಇವರು ವಹಿಸಿದ್ದರು. ನಾಯಕಿಯರಾಗಿ ಕುಮಾರಿ ರಜನಿ. ಹೆಚ್.ಎಂ., ಕುಮಾರಿ ಅನಿತಾ ಕಾರ್ಯನಿರ್ವಹಿಸಿದ್ದರು.

* ಮೇ 9 ರಿಂದ 11 ರ ವರೆಗೆ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್‌ಗಳು ಚಾರಣದಲ್ಲಿ ಭಾಗವಹಿಸಿದ್ದರು. ಮಡಿಕೇರಿ ಜಿಲ್ಲೆಯ ಕುಶಾಲನಗರ, ದುಬಾರೆ ಆನೆ ತರಬೇತಿ ಶಿಬಿರ, ಅಬ್ಬಿಫಾಲ್ಸ್, ಭಾಗಮಂಡ, ತಲಕಾವೇರಿ ದಕ್ಷಿಣ ಕನ್ನಡ ಜಿಲ್ಲೆಯ ಸುಬ್ರಮಣ್ಯ, ಕುಮಾರಪರ್ವತ ಬೆಟ್ಟ, ಧರ್ಮಸ್ಥಳದಂತಹ ಪ್ರಸಿದ್ಧ ಸ್ಥಳಗಳಲ್ಲಿ ಚಾರಣ ನಡೆಸಿ ಸ್ವಚ್ಚತಾ ಕಾರ್ಯ ಮಾಡುವುದರೊಂದಿಗೆ ಪ್ರಕೃತಿಯ ಬಗ್ಗೆ ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ತಿಳಿಸಲಾಯಿತು. ಈ ಶಿಬಿರದ ನಾಯಕರಾಗಿ ಶ್ರೀ ಎನ್.ಡಿ. ತಮ್ಮಣ್ಣನವರ್, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಕಾರ್ಯನಿರ್ವಹಿಸಿದ್ದರು. ಭಾರತ್ ಸ್ಕೌಟ್ಸ್-ಗೈಡ್ಸ್ ಮಡಿಕೇರಿ ಜಿಲ್ಲಾ ಸಂಸ್ಥೆಯ ಜಿಲ್ಲಾ ತರಬೇತಿ ಆಯುಕ್ತರು (ಗೈಡ್) ಶ್ರೀಮತಿ ಮೇರಿ, ಶ್ರೀ ಟಿ.ಎಸ್. ಶಿವಣ್ಣ, ಕುಮಾರಿ ಪ್ರಿಯಾಂಕ, ಹೆಚ್.ಎಂ. ಜಿಲ್ಲಾ ಸಂಘಟಕರು ಹಾಗೂ ಶ್ರೀಮತಿ ಆರ್. ಸುಖವಾಣಿ ಜಿಲ್ಲಾ ಜಂಟಿ ಕಾರ್ಯದರ್ಶಿಗಳು ಶಿಬಿರದ ಮಾರ್ಗದರ್ಶಕರಾಗಿದ್ದರು. 5 ರೋವರ್ ಸ್ಕೌಟ್ ಲೀಡರ್ ಮತ್ತು ರೇಂಜರ್ ಲೀಡರ್ಸ್‌ಗಳು ಭಾಗವಹಿಸಿದ್ದರು.

* ಮೇ 15 ರಿಂದ 16 ರ ವರೆಗೆ ಅನ್‌ಮೋಲ್ ಪಬ್ಲಿಕ್ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಮಡಿಕೇರಿ ಜಿಲ್ಲೆಯಲ್ಲಿ 2 ದಿನಗಳ ರಾತ್ರಿ ಶಿಬಿರವನ್ನು ಆಯೋಜಿಸಲಾಗಿತ್ತು. ಸುಮಾರು 38 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ರವೀಂದ್ರಸ್ವಾಮಿ ಟಿ.ಎಂ. ಇವರು ಕಾರ್ಯನಿರ್ವಹಿಸಿದ್ದರು. ಸ್ಕೌಟ್ ಮಾಸ್ಟರ್ ಶ್ರೀ ವಿಜಯ್ ಗೈಡ್ ಕ್ಯಾಪ್ಟನ್ ಕುಮಾರಿ ರಮ್ಯ. ಹೆಚ್.ಎಂ. ಭಾಗವಹಿಸಿದ್ದರು.

* ಜೂನ್ 17 ರಂದು ಧ.ರಾ.ಮ. ಸ್ಕೌಟ್ ಭವನದ ಆವರಣದಲ್ಲಿ ವಿಶ್ವ ಪರಿಸರ ದಿನಾಚರಣೆ ಪ್ರಯುಕ್ತ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ದಾವಣಗೆರೆ ವತಿಯಿಂದ ಹೊಂಗೆ ಮರ, ಶ್ರೀಗಂಧ ಮರದ ಬೀಜದ ಉಂಡೆ ತಯಾರಿಕೆ ಕಾರ್ಯಕ್ರಮವನ್ನು ಅನ್‌ಮೋಲ್ ಪಬ್ಲಿಕ್ ಶಾಲೆಯ ನಿರ್ದೇಶಕರು ಮತ್ತು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಉದ್ಘಾಟಿಸಿದರು. ಸದರಿ ಕಾರ್ಯಕ್ರಮದಲ್ಲಿ ದಾವಣಗೆರೆ ಜಿಲ್ಲೆಯ ವಿವಿಧ ಶಾಲೆಯ ಸುಮಾರು 250ಕ್ಕೂ ಹೆಚ್ಚು ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಜೂನ್ 18ರಂದು ಭಾನುವಾರ ಬೆಳಗ್ಗೆ 10.00 ಗಂಟೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ ಇಲ್ಲಿ ತಯಾರಿಸಿದ ಬೀಜದ ಉಂಡೆಗಳನ್ನು ಶಿಬಿರ ಕೇಂದ್ರದ ಗುಡ್ಡದಲ್ಲಿ ಬಿತ್ತುವ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು.



## ಗದಗ



ಜೂನ್ 11 ರಿಂದ 13 ರ ವರೆಗೆ ಸ್ಕೌಟ್-ಗೈಡ್, ರೋವರ್-ರೇಂಜರ್‌ಗಳಿಗೆ ರಾಜ್ಯ ಪುರಸ್ಕಾರ ಹಾಗು ರಾಷ್ಟ್ರಪತಿ ಪದಕ ಪೂರ್ವಸಿದ್ಧತಾ ಶಿಬಿರಗಳನ್ನು ಗುರುಭವನದಲ್ಲಿ ನಡೆಸಲಾಯಿತು. ಸ್ಕೌಟ್ ವಿಭಾಗಕ್ಕೆ ಶ್ರೀ ಹನುಮಾನಸಿಂಗ ಬ್ಯಾಳಿ ಗೈಡ್ ವಿಭಾಗಕ್ಕೆ ಶ್ರೀಮತಿ ಬಿ.ಡಿ. ಪವಾರ ರೋವರ್ ವಿಭಾಗಕ್ಕೆ ಶ್ರೀ ಶಾಂತಕುಮಾರ ಮೆಲ್ಲಾಪುರ ನಾಯಕತ್ವ ವಹಿಸಿದ್ದರು. ಒಟ್ಟು 142 ಶಿಬಿರಾರ್ಥಿಗಳು ಭಾಗವಹಿಸಿದ್ದರು.

## ಹಾಸನ



ವಿ.ಪಿ. ದೀನದಯಾಳು ನಾಯ್ಡು ಅವರ ಜನ್ಮ ಶತಮಾನೋತ್ಸವ ಆಚರಣೆ ಪ್ರಯುಕ್ತ ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ, ಹಾಸನ ಜಿಲ್ಲಾಡಳಿತ, ಜಿಲ್ಲಾ ಪಂಚಾಯತ್, ನಗರಸಭೆ, ಸರ್ಕಾರಿ ಕಲಾ, ವಾಣಿಜ್ಯ ಮತ್ತು ಸ್ನಾತಕೋತ್ತರ ಕಾಲೇಜು (ಸ್ವಾಯತ್ತ) - ಹಾಸನ, ವೈ.ಎಸ್.ಆರ್. ಫೌಂಡೇಷನ್, ಏಕಲವ್ಯ ರೋವರ್ ಮುಕ್ತದಳ ಇವರುಗಳ ಸಂಯುಕ್ತಾಶ್ರಯದಲ್ಲಿ ಜೂನ್ 17 ರಿಂದ 22ರ ವರೆಗೆ ಹಾಸನದಲ್ಲಿ ರೋವರ್-ರೇಂಜರ್‌ಗಳ ಸಮುದಾಯಾಭಿವೃದ್ಧಿ ಶಿಬಿರವನ್ನು ಹಮ್ಮಿಕೊಂಡು ಜಿಲ್ಲೆಯ ಚಿಕ್ಕ ಕಡಲೂರು, ಯಲಗುಂಟ, ಉದ್ದೂರಹಳ್ಳಿ, ಬಾಲನಾಯ್ಕನ ಹಳ್ಳಿ ಮುಂತಾದ ಗ್ರಾಮಗಳಲ್ಲಿನ ಕಲ್ಯಾಣಿಗಳ ಹೂಳು ತೆಗೆಯಲಾಯಿತು. ಕಾರ್ಯಕ್ರಮಕ್ಕೆ ಸ್ವಾತಂತ್ರ್ಯ ಹೋರಾಟಗಾರ ಡಾ. ಎಚ್.ಎಮ್. ಶಿವಣ್ಣ ಚಾಲನೆ ನೀಡಿದರು. ಡಡಾ. ವೈ.ಎಸ್. ವೀರಭದ್ರಪ್ಪ ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಪ್ರಾಂಶುಪಾಲರಾದ ಡಾ. ಡಿ.ಜಿ. ಕೃಷ್ಣೇಗೌಡ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಶುಭ ಹಾರೈಸಿದರು.

## ಕಾರವಾರ

* ಜೂನ್ 20 ರಿಂದ 30 ರ ವರೆಗೆ ಹೊನ್ನಾವರದ ಮಾರ್ಥೋಮಾ ಶಾಲೆಯ ಆವರಣದಲ್ಲಿ ಜಿಲ್ಲಾ ಸಂಸ್ಥೆ ಹಾಗು ಹೊನ್ನಾವರ ತಾಲೂಕಾ ಸಂಸ್ಥೆ ಯವರು ಬೇಸಿಗೆ ರಜಾ ಶಿಬಿರವನ್ನು ಏರ್ಪಡಿಸಿದ್ದರು. ಈ ಶಿಬಿರವು ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಜಿ.ಜಿ. ಸಭಾಹಿತ ರವರ ಆಶೀವಾದದೊಂದಿಗೆ ಪ್ರಾರಂಭಗೊಂಡಿತು. ಈ ಶಿಬಿರದಲ್ಲಿ ತಾಲೂಕಿನ 30 ಸ್ಕೌಟ್ಸ್-ಗೈಡ್ಸ್‌ಗಳು ತರಬೇತಿಯನ್ನು ಪಡೆದಿರುತ್ತಾರೆ. ಅವರಿಗೆ ಪ್ರಥಮ, ದ್ವಿತೀಯಾ ಹಾಗೂ ತೃತೀಯ ಸೋಪಾನ ಕೌಶಲ್ಯಗಳ ಬಗ್ಗೆ ತಿಳಿಸಿಲಾಯಿತು. ಹೊನ್ನಾವರದ ಪಿ.ಎಸ್.ಐ. ಆದ ಶ್ರೀ ಆನಂದ ಮೂರ್ತಿಯವರು ಸ್ಕೌಟ್-ಗೈಡ್‌ಗಳಿಗೆ ರಸ್ತೆಯ ನಿಯಮಗಳ ಬಗ್ಗೆ ಪಾಠವನ್ನು ಮಾಡಿದರು. ಈ ಶಿಬಿರಕ್ಕೆ ಜಿಲ್ಲಾ ಪದಾಧಿಕಾರಿಗಳು ಭೇಟಿ ನೀಡಿದ್ದರು.



## ಕೋಲಾರ



ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲ್ಲೂಕಿನ ಸರ್ಕಾರಿ ಪ್ರೌಢಶಾಲೆ, ಗುಲ್ಲಹಳ್ಳಿಯ ರಾಣಿ ಚೆನ್ನಮ್ಮ ಗೈಡ್ ಕಂಪನಿಯಲ್ಲಿ ವಿಶ್ವ ಪರಿಸರ ದಿನಚರಣೆಯನ್ನು ಆಚರಿಸಲಾಯಿತು. ಗೈಡ್‌ಗಳು ಬೀಜದ ಉಂಡೆಗಳನ್ನು ಮಾಡಿ ಅವುಗಳನ್ನು ಭೂಮಿಯಲ್ಲಿ ಹುದುಗಿಸಿದ ನಂತರ ಭಿತ್ತಿ ಪತ್ರಗಳನ್ನು ಹಿಡಿದು ಊರಿನಲ್ಲಿ ಜಾಥಾನಡೆಸಿ ಜನರಲ್ಲಿ ಪರಿಸರದ ಬಗ್ಗೆ ಅರಿವು ಮೂಡಿಸಿದರು. ಕಾರ್ಯಕ್ರಮದಲ್ಲಿ ಮುಖ್ಯೋಪಾಧ್ಯಾಯರಾದ ಶ್ರೀ ರಾಜೇಂದ್ರ, ಸಹ ಶಿಕ್ಷಕಿಯರಾದ ಶ್ರೀಮತಿ ವನಿತ, ಶ್ರೀಮತಿ ಲಿಡಿಯಾ ಕುಮಾರಿ, ಶ್ರೀಮತಿ ಕಲಾ ಭಾಗವಹಿಸಿದ್ದರು. ಕಾರ್ಯಕ್ರಮವನ್ನು ಗೈಡ್ ಕ್ಯಾಪ್ಟನ್ ಶ್ರೀಮತಿ ಸುಮಿತ್ರಾ ರವರು ಆಯೋಜಿಸಿದ್ದರು.

## ರಾಯಚೂರು



ಜೂನ್ 5 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ರಾಯಚೂರು, ಸ್ಥಳೀಯ ಸಂಸ್ಥೆ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಸಿಂಧನೂರು ಇವರ ಸಂಯುಕ್ತಾಶ್ರಯದಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ರವುಡಕುಂದದಲ್ಲಿ ವಿಶ್ವ ಪರಿಸರ ದಿನವನ್ನು ಆಚರಿಸಲಾಯಿತು. ಶ್ರೀ ಹೆಚ್. ಕಲ್ಯಾಣಪ್ಪ ಹಿರೇಗೌಡರು, ಅಧ್ಯಕ್ಷರು ವ್ಯ.ಸ.ಸಂಘ ರವುಡಕುಂದ ಇವರು ಸಸಿಗೆ ನೀರು ಹಾಕುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ನಂತರ ಅವರು ಮಾತನಾಡಿ, ಮನೆಗೊಂದು ಮರ ಊರಿಗೊಂದು ವನ ಎಂಬ ನುಡಿಯಂತೆ ನಾವೆಲ್ಲರು ಹೆಚ್ಚಿನ ಮರಗಳನ್ನು ಬೆಳೆಸೋಣ, ಪರಿಸರದ ಸಂರಕ್ಷಣೆ ನಮ್ಮೆಲ್ಲರ ಹೊಣೆಯಾಗಿದೆ. ಇವತ್ತು ಜಾಗತಿಕ ತಾಪಮಾನದಲ್ಲಿ ಬಹಳಷ್ಟು ಬದಲಾವಣೆಯಾಗುತ್ತಿರುವುದು ಕಾಣುತ್ತಿದ್ದೇವೆ. ಅದನ್ನು ಸಮತೋಲನದಲ್ಲಿ ಇಡುವುದು ಎಲ್ಲರ ಆದ್ಯ ಕರ್ತವ್ಯವಾಗಿದೆ ಎಂದರು.

ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಮಾತನಾಡಿದ ಶ್ರೀ ರಾವುತ್‌ರಾವ್ ಬರೂರ, ಜಿಲ್ಲಾ ಸಂಘಟನಾ ಆಯುಕ್ತರು, ಸಸಿ ನೆಡುವುದು ಅಷ್ಟೇ ಅಲ್ಲ ಅದರ ಸುತ್ತಮುತ್ತಲಿನ ಪರಿಸರವನ್ನು ಸ್ವಚ್ಛವಾಗಿಡಬೇಕು, ಪ್ಲಾಸ್ಟಿಕ್ ಬಳಕೆಯನ್ನು ಕಡಿಮೆ ಮಾಡಿ, ಜಾಗತಿಕ ತಾಪಮಾನವನ್ನು ತಡೆಗಟ್ಟಲು ಹೆಚ್ಚಿನ ಮರಗಳನ್ನು ಬೆಳೆಸಿ, ಸ್ವಚ್ಛ ಭಾರತ್ ಅಭಿಯಾನದ ಕನಸನ್ನು ನನಸು ಮಾಡುವಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಶ್ರಮಿಸುತ್ತಿದ್ದಾರೆ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ, ಶ್ರೀ ಎಸ್ ಶರಣೇಗೌಡ, ಅಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಸಿಂಧನೂರು ಇವರು ಮಕ್ಕಳ ಉತ್ತಮ ಶಿಕ್ಷಣಕ್ಕೆ ಉತ್ತಮವಾದ ಪರಿಸರ ಅಗತ್ಯ ಅಂತಹ ಪರಿಸರವನ್ನು ನಿರ್ಮಾಣ ಮಾಡುವಲ್ಲಿ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳ ಪಾತ್ರ ಬಹುಮುಖ್ಯವಾದದ್ದು. ಆ ನಿಟ್ಟಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗಿಡಗಳನ್ನು ಬೆಳೆಸಲು ಮತ್ತು ಗ್ರಾಮದಲ್ಲಿ ಶೌಚಾಲಯಗಳ ನಿರ್ಮಾಣ ಮಾಡುವಂತೆ ಜನರಲ್ಲಿ ಅರಿವು ಮೂಡಿಸುವ ಕೆಲಸವನ್ನು ಸ್ಕೌಟ್ಸ್-ಗೈಡ್ಸ್‌ಗಳು ಮಾಡಬೇಕೆಂದರು. ಕಾರ್ಯಕ್ರಮದ ವೇದಿಕೆಯಲ್ಲಿ ಶ್ರೀ ರಾಮದಾಸ ಜಿಲ್ಲಾ ಜಂಟಿ ಕಾರ್ಯದರ್ಶಿಗಳು, ಶ್ರೀಮತಿ ಸೀಮಾ ಜೆ. ಜಿಲ್ಲಾ ಗೈಡರ್ ಪ್ರತಿನಿಧಿಗಳು, ಶ್ರೀ ಗಂಗಾಧರಯ್ಯ ಕಾರ್ಯದರ್ಶಿಗಳು, ಶ್ರೀ ಮೌಲಾಸಾಬ್ ತಾಳಿಕೋಟಿ ಮುಖ್ಯಗುರುಗಳು ಶಾಲಾ ಅಭಿವೃದ್ಧಿ ಸಮಿತಿಯ ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಸದಸ್ಯರುಗಳು, ಶಾಲಾ ಶಿಕ್ಷಕ ವೃಂಧದವರು ಹಾಗೂ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಶ್ರೀ ಭೀಮಸೇನ್ ಶಿಕ್ಷಕರು ಎಲ್ಲರನ್ನು ಸ್ವಾಗತಿಸಿದರು. ಶ್ರೀ ಗಂಗಪ್ಪ ಸ್ಕೌಟ್ ಮಾಸ್ಟರ್ ಇವರು ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ವಿಶ್ವನಾಥ ಜಿಲ್ಲಾ ಸಂಘಟಕರು ವಂದಿಸಿದರು.

* ಜೂನ್ 21 ರಂದು ಭಾರತ್ ಸ್ಕೌಟ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ, ರಾಯಚೂರು ಇವರುಗಳ ಸಂಯುಕ್ತಾಶ್ರಯದಲ್ಲಿ "ವಿಶ್ವ ಯೋಗ ದಿನಾಚರಣೆ" ಕಾರ್ಯಕ್ರಮವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಏರ್ಪಡಿಸಲಾಗಿತ್ತು. ಯೋಗ ಪ್ರದರ್ಶನ ನೀಡಿ ಮಾತನಾಡಿದ, ಬಿ.ಎನ್. ಡಬ್ಲ್ಯೂ. ಪತಂಜಲಿ ಯೋಗ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ತಿಮ್ಮಪ್ಪ ಎನ್. ವಡ್ಡೆಪಲ್ಲಿ, ಪ್ರತಿಯೊಬ್ಬರು ತಮ್ಮ ಆರೋಗ್ಯ ವೃದ್ಧಿಸಿಕೊಳ್ಳಲು ಉತ್ತಮವಾದ ಯೋಗಾಭ್ಯಾಸ ಅಳವಡಿಸಿಕೊಳ್ಳುವುದು ಅವಶ್ಯಕ. ನಮ್ಮ ದೇಶದ ಮೂಲ ವಿದ್ಯೆಯಾದ ಯೋಗವು ಹೊರ ದೇಶಗಳಲ್ಲಿ ಬೆಳೆಯುತ್ತಿದ್ದು ನಮ್ಮ ಪ್ರಧಾನಿಯವರು ದೇಶದ ಜನತೆಯ ಸಮಗ್ರ ಆರೋಗ್ಯವನ್ನು ವೃದ್ಧಿಸಿಕೊಳ್ಳಲು ಯೋಗ ದಿನದ ಮೂಲಕ ಹೆಚ್ಚಿನ ಹೋಗ ಪ್ರಚಾರಕ್ಕಾಗಿ ಚಾಲನೆ ನೀಡಿದರು. ಇತ್ತೀಚಿನ ದಿನಗಳಲ್ಲಿ ಯೋಗವು ಏಕಾಗ್ರತೆ, ದೈಹಿಕ ಮಾನಸಿಕ ಸಾಮಾಜಿಕ ಮತ್ತು ಆಧ್ಯಾತ್ಮಿಕ ಆರೋಗ್ಯವನ್ನು ಹೆಚ್ಚಿಸುವುದು ಎಂದರು.



ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಶ್ರೀ ಬಸವರಾಜ ಬೊರಡ್ಡಿ, ಕಾರ್ಯದರ್ಶಿಗಳು, ಸ್ಥಳೀಯ ಸಂಸ್ಥೆ, ಯೋಗದ ಮಹತ್ವ ಕುರಿತು ಜನಸಾಮಾನ್ಯರಿಗೆ ತಿಳುವಳಿಕೆ ಮೂಡಿಸುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ. "ಯೋಗಮಾಡಿ ನಿರೋಗಿಯಾಗಿ" ಇರೋಣ ಎಂದು ಹೇಳಿದರು. ಈ ಸಂದರ್ಭದಲ್ಲಿ ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಗೈ), ಶ್ರೀಮತಿ ಕೆ. ಆಲಿಯಾ ಖಾನಂ ಜಿಲ್ಲಾ ಖಜಾಂಚಿಗಳು, ಶ್ರೀ ಆದೇಶಪ್ಪ ಯೋಗ ಶಿಕ್ಷಕರು ಸಿಂಧನೂರು, ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು, ಶ್ರೀವಿಶ್ವನಾಥ ಗೌಡ ಡಿ.ಓ., ಶ್ರೀಮತಿ ಗೀತಾ ಜಿ. ಕುಮಾರಿ ಲಕ್ಷ್ಮೀದೇವಿ ಎ., ಶ್ರೀಮತಿ ಶಂಶಾದ ಬೇಗಂ, ಶ್ರೀ ಲಿಂಗಯ್ಯ ಸ್ಕೌಟ್ ಮಾಸ್ಟರ್ ಹಾಗೂ ವಿವಿಧ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಜೂನ್ 21 ರಂದು "ವಿಶ್ವ ಯೋಗ ದಿನ"ವನ್ನು ರಾಯಚೂರು ನಗರದ ಬಸವಶ್ರೀ ಶಾಲೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಸಹಯೋಗದಲ್ಲಿ ಆಚರಿಸಲಾಯಿತು. ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಡಾ॥ ಬಸನಗೌಡ, ಸುಗುಣಾ ಶಿಕ್ಷಣ ಸಂಸ್ಥೆಯ ಅಧ್ಯಕ್ಷರು, ಮಾತನಾಡಿ ದೇಹಕ್ಕೆ ನಾವು ಸರಿಯಾದ ವ್ಯಾಯಾಮ ನೀಡಿ ಅದನ್ನು ಸಮತೋಲನದಲ್ಲಿ ಇಟ್ಟರೆ ಯಾವುದೇ ಕಾಯಿಲೆಗಳಿಗೆ ಆಸ್ಪದ ಸಿಗುವುದಿಲ್ಲ. ಆದ್ದರಿಂದ ನಾವು ಯೋಗವನ್ನು ನಮ್ಮ ಜೀವನದಲ್ಲಿ ರೂಢಿಸಿಕೊಳ್ಳಬೇಕು. ಎಂದು ಹೇಳಿದರು. ಶ್ರೀ ಬಸವರಾಜ ಬೋರಡ್ಡಿ, ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ, ಇವರು ಮಾತನಾಡಿ, ಸ್ಕೌಟ್ಸ್-ಗೈಡ್ಸ್ ಮಕ್ಕಳು ಯೋಗದ ಮಹತ್ವವನ್ನು ಜನರಲ್ಲಿ ಜಾಗೃತಿ ಮಾಡಬೇಕೆಂದು ನುಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮತಿ ಲಲಿತಾ ಎಂ., ಸುಗುಣಾ ಶಿಕ್ಷಣ ಸಂಸ್ಥೆಯ ಸಂಸ್ಥಾಪಕರು, ವಹಿಸಿದ್ದರು. ಈ ಸಂದರ್ಭದಲ್ಲಿ ಯೋಗ ಗುರು, ಬಿ.ಎನ್.ಡಬ್ಲ್ಯೂ ಪತಂಜಲಿ ಯೋಗ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ತಿಮ್ಮಪ್ಪ ಎನ್. ವಡ್ಡೆಪಲಿ ಇವರು ಹಾಗೂ ಯೋಗ ಪ್ರದರ್ಶನ ನಡೆಸಿದರು. ಈ ಸಂದರ್ಭದಲ್ಲಿ ಶ್ರೀರಾವುತರಾವ್ ಬರೂರ ಡಿ.ಓ.ಸಿ., ಶ್ರೀಮತಿ ವಿಜಯಲಕ್ಷ್ಮೀ ಗೈಡ್ ಕ್ಯಾಪ್ಟನ್ ಶ್ರೀ ಲಿಂಗಯ್ಯ ಸ್ಕೌ. ಮಾ. ಹಾಗೂ ಶಾಲಾ ಶಿಕ್ಷಕರು, ವಿದ್ಯಾರ್ಥಿಗಳು ಭಾಗವಹಿಸಿದ್ದರು.



* ರಾಜ್ಯ ಜಂಟಿ ಕಾರ್ಯದರ್ಶಿಗಳಾಗಿದ್ದ ಶ್ರೀಮತಿ ಎಸ್.ಕೆ. ಪ್ರಭಾರವರ ನಿಧನಕ್ಕೆ ಗೌರವ ಸೂಚಿಸಲು ಶ್ರದ್ಧಾಂಜಲಿಸಭೆ ನಡೆಸಲಾಯಿತು.

## ಶಿವಮೊಗ್ಗ



ಜೂನ್ 5 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಶಿವಮೊಗ್ಗದಲ್ಲಿ ನಡೆದ ವಿಶ್ವ ಪರಿಸರ ದಿನಾಚರಣೆ ಅಂಗವಾಗಿ "ಸೀಡ್ ಬಾಲ್" ತಯಾರಿಕಾ ಕಾರ್ಯಾಗಾರಕ್ಕೆ ಉತ್ತಿಷ್ಠ ಭಾರತ ಸಂಸ್ಥೆಯ ಸದಸ್ಯರಾದ ಶ್ರೀ ಬಾಲಕೃಷ್ಣ ನಾಯ್ಡುರವರು ಮುಖ್ಯ ಅತಿಥಿಯಾಗಿ ಉಪಸ್ಥಿತರಿದ್ದರು. ಸ್ವಾಗತವನ್ನು ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಕೆ.ಪಿ. ಬಿಂದುಕುಮಾರ್ ನೆರವೇರಿಸಿದರು. ನಂತರದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿಯವರು ಸೀಡ್ ಬಾಲ್ ತಯಾರಿಸುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಆ ಮೂಲಕ ಸೀಡ್ ಬಾಲ್ ಬಳಕೆಯಿಂದ ಆಗುವ ಪ್ರಯೋಜನಗಳೇನು ಎಂಬುದನ್ನು ಮಕ್ಕಳಿಗೆ ತಿಳಿಹೇಳಿದರು ಮತ್ತು ಇಂತಹ ಕಾರ್ಯಕ್ರಮಗಳನ್ನು ಆಯೋಜಿಸುವ ಮೂಲಕ ಸ್ಕೌಟ್-ಗೈಡ್ ಸಂಸ್ಥೆಯು ಉತ್ತೇಜನ ನೀಡುತ್ತಿದೆ ಎಂದು ನುಡಿದರು.

ಕಾರ್ಯಕ್ರಮದ ಮುಖ್ಯ ಅತಿಥಿಗಳಾದ ಶ್ರೀ ಬಾಲಕೃಷ್ಣ ನಾಯ್ಡು ರವರು ಮಕ್ಕಳಿಗೆ ಸೀಡ್ ಬಾಲ್ ತಯಾರಿಸುವ ವಿಧಾನವನ್ನು ಪ್ರಾತ್ಯಕ್ಷಿಕೆ ಮೂಲಕ ತೋರಿಸಿಕೊಟ್ಟರು. ಮತ್ತು ಶಿವಮೊಗ್ಗ ಜಿಲ್ಲೆಯಲ್ಲಿ ಇದುವರೆಗೂ ತಯಾರಿಸಿದ ಸೀಡ್‌ಬಾಲ್ ಕುರಿತು ಮಕ್ಕಳಿಗೆ ವಿವರಿಸಿದರು.

ಈ ಕಾರ್ಯಕ್ರಮಕ್ಕೆ ವಿವಿಧ ಶಾಲೆಯ ಸುಮಾರು ನೂರು ಸ್ಕೌಟ್-ಗೈಡ್‌ಗಳು ಹಾಜರಿದ್ದರು. ಎ.ಎಸ್.ಓ.ಸಿ. ಶ್ರೀಮತಿ ಭಾರತಿ ಡಯಾಸ್ ಕಾರ್ಯಕ್ರಮವನ್ನು ನಿರೂಪಿಸಿದರು. ಜಿಲ್ಲಾ ಖಜಾಂಚಿ ಶ್ರೀ ಹೆಚ್. ಪರಮೇಶ್ವರವರು ವಂದಿಸಿದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ತರಬೇತಿ ಆಯುಕ್ತಾದ ಶ್ರೀ ಎ.ವಿ. ರಾಜೇಶ್ ಸ್ಥಳೀಯ ಕಾರ್ಯದರ್ಶಿಯಾದ ಡಿ.ಎನ್. ನೂರ್ ಅಹಮದ್ ಹಾಗೂ ರೋವರ್ಸ್-ರೇಂಜರ್ಸ್ ಉಪಸ್ಥಿತರಿದ್ದರು.



* ಜೂನ್ 5 ರಂದು ಪರಿಸರ ದಿನಾಚರಣೆ ಅಂಗವಾಗಿ ಸರ್ಕಾರಿ ಪ್ರೌಢಶಾಲೆ, ಕೂಡುಮಲ್ಲಿಗೆ, ಶಿವಮೊಗ್ಗ ಶಾಲೆಯ ಮದರ್ ತೆರೇಸಾ ಗೈಡ್ ಕಂಪನಿ ವತಿಯಿಂದ 50 ವಿವಿಧ ಜಾತಿಯ ಸಸಿಗಳನ್ನು ನೆಡಲಾಯಿತು. ಶಾಲೆಯ ಗೈಡ್ಸ್ ತಂಡದಿಂದ 18 ಗೈಡ್ಸ್‌ಗಳು ಸ್ವತಃ 2 ದಿನ ಮುಂಚೆ ಶ್ರಮದಾನ ಮಾಡಿ ಸಸಿ ನೆಡಲು ಗುಂಡಿಗಳನ್ನು ತೆಗೆದಿದ್ದರು. ಮತ್ತು ಅದಕ್ಕೆ ಬೇಕಾದ ಸಿದ್ಧತೆಗಳನ್ನು ಸ್ವತಃ ಅವರೇ ಮಾಡಿಕೊಂಡಿದ್ದರು. ಈ ಸಮಾರಂಭದ ಉದ್ಘಾಟನೆಯನ್ನು ಸಸಿ ನೆಡುವುದರ ಮೂಲಕ ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ರಮೇಶ್ ಗಾಣಗುಡಿಗೆ ಇವರು ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ ಎಸ್.ಡಿ.ಎಂ.ಸಿ. ಸದಸ್ಯರಾದ ಶ್ರೀ ಚಿಡುವ ಮಂಜುನಾಥ, ಶ್ರೀಮತಿ ಪದ್ಮಾ, ಶಿಕ್ಷಕರಾದ ಶ್ರೀ ಗಿರೀಶ್, ಶ್ರೀಮತಿ ಎಂ.ಆರ್. ರಾಜೇಶ್ವರಿ ಹಾಗೂ ಗೈಡ್ಸ್ ತಂಡದ ನಾಯಕಿಯಾದ ಶ್ರೀಮತಿ ಸುಜಾತ. ಡಿ ಇವರು ಉಪಸ್ಥಿತರಿದ್ದರು. ಸಮಾರಂಭದ ಅಧ್ಯಕ್ಷತೆಯುನ್ನು ಶಾಲಾ ಮುಖ್ಯೋಪಾದ್ಯಾಯರಾದ ಶ್ರೀ ಬಿ.ಎಸ್. ಮಹೇಶ್ವರಪ್ಪ ಇವರು ವಹಿಸಿದ್ದರು.




* ಜೂನ್ 7 ರಂದು ಜಿಲ್ಲಾ ಸ್ಕೌಟ್ ಭವನ, ಶಿವಮೊಗ್ಗದಲ್ಲಿ ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಜಂಟಿ ಕಾರ್ಯದರ್ಶಿ(ಗೈಡ್), ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಇವರು ಬೆಂಗಳೂರಿನಲ್ಲಿ ಅಕಾಲಿಕ ನಿಧನ ಹೊಂದಿದ ಪ್ರಯುಕ್ತ ಶ್ರದ್ಧಾಂಜಲಿ ಸಭೆಯನ್ನು ಹಮ್ಮಿಕೊಳ್ಳಲಾಗಿತ್ತು.

## ತುಮಕೂರು

ಮೇ 25 ರಿಂದ 28 ರ ವರೆಗೆ ಶ್ರೀ ಸಿದ್ಧರಬೆಟ್ಟ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆಯಲ್ಲಿ ರಾಷ್ಟ್ರಪತಿ ಪದಕಕ್ಕೆ ಅರ್ಜಿ ಸಲ್ಲಿಸಿರುವ ಸ್ಕೌಟ್-ಗೈಡ್‌ಗಳಿಗೆ ಸನಿವಾಸ ಶಿಬಿರವನ್ನು ಆಯೋಜಿಸಲಾಗಿತ್ತು. ಶ್ರೀ ಟಿ.ಸಿ. ಗಂಗಾಧರ್, ಎಲ್.ಟಿ., ಇವರು ಸ್ಕೌಟ್ ಶಿಬಿರದ ನಾಯಕರಾಗಿದ್ದರು, ಗೈಡ್ ವಿಭಾಗಕ್ಕೆ ಶ್ರೀಮತಿ ಜಯಮ್ಮ, ಗುಬ್ಬಿ ತಾಲ್ಲೂಕು ನಾಯಕಿಯಾಗಿದ್ದರು. 10 ಸ್ಕೌಟ್ಸ್, 20 ಗೈಡ್ಸ್‌ಗಳು ಭಾಗವಹಿಸಿದ್ದರು.

ಈ ಕಾರ್ಯಕ್ರಮದಲ್ಲಿ ಪ್ರವೇಶ್, ಪ್ರಥಮ-ದ್ವಿತೀಯ-ತೃತೀಯ ಸೋಪಾನ್‌ಗಳ ವಿಷಯಗಳು ಹಾಗೂ ಗಂಟುಗಳು ಮತ್ತು ಫ್ಲಾಗ್ ಪ್ರೊಸಿಜರ್ ಬಗ್ಗೆ ಮಾಹಿತಿ ನೀಡಲಾಯಿತು.

## ಉಡುಪಿ



ಜೂನ್ 5 ರಂದು ಜಿಲ್ಲಾ ಆಡಳಿತ (ಉಡುಪಿ ಜಿಲ್ಲೆ) ಭಾರತ್ ಸ್ಕೌಟ್ಸ್-ಗೈಡ್ಸ್ ಉಡುಪಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಇವರ ಸಂಯುಕ್ತ ಆಶ್ರಯದಲ್ಲಿ ವಿಶ್ವ ಪರಿಸರ ದಿನಾಚರಣೆ ಹಾಗೂ ಜಾಥಾ ಕಾರ್ಯಕ್ರಮವು ಉಡುಪಿ ಜಿಲ್ಲಾಧಿಕಾರಿ ಶ್ರೀಮತಿ ಪ್ರಿಯಾಂಕ ಮೇರಿ ಫ್ರಾನ್ಸಿಸ್ ಭಾ.ಆ.ಸೇ. ಇವರ ನೇತೃತ್ವದಲ್ಲಿ ನಡೆಯಿತು. ಬೆಳಗ್ಗೆ 9.00ಕ್ಕೆ ಮಂಗಳೂರು ವಲಯ ಹಿರಿಯ ಪರಿಸರ ಅಧಿಕಾರಿ ಶ್ರೀ ರಾಜಶೇಖರ್ ಪುರಾಣಿಕ್ ರವರು ಜಾಥಾವನ್ನು ಉದ್ಘಾಟನೆ ಮಾಡಿದರು.



ಈ ಜಾಥಾವು ಅಜ್ಜರಕಾಡಿನಿಂದ ಹೊರಟು ಜಿಲ್ಲಾಧಿಕಾರಿಗಳ ಕಛೇರಿ ರಜತಾದ್ರಿ ಮಣಿಪಾಲಕ್ಕೆ ತಲುಪಿ, ಅಲ್ಲಿ ಉಡುಪಿ ಜಿಲ್ಲಾಧಿಕಾರಿ ಶ್ರೀಮತಿ ಪ್ರಿಯಾಂಕಮೇರಿ ಫ್ರಾನ್ಸಿಸ್, ಪ್ರಧಾನ ಜಿಲ್ಲಾ ಹಾಗೂ ಸತ್ರ ನ್ಯಾಯಾಧೀಶರಾದ ಶ್ರೀ ಟಿ. ವೆಂಕಟೇಶ್ ನಾಯ್ಕ್ ರಾಜ್ಯ ಅಧ್ಯಕ್ಷರು ಉಡುಪಿ ಜಿಲ್ಲಾ ಪಂಚಾಯತ್ ಆದ ಶ್ರೀ ದಿನಕರ ಬಾಬು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಉಪಾಧ್ಯಕ್ಷರಾದ ಶ್ರೀಮತಿ ಶಾಂತ ವಿ. ಆಚಾರ್ಯ, ಹಿರಿಯ ಸಿವಿಲ್ ನ್ಯಾಯಾಧೀಶೆಯಾದ ಶ್ರೀಮತಿ ಲತಾ ಇವರುಗಳ ಸಾಂಕೇತಿಕವಾಗಿ ಗಿಡಗಳನ್ನು ನೆಟ್ಟರು. ನಂತರ ಅಟಲ್ ಬಿಹಾರಿ ವಾಜಪೇಯಿ ಸಭಾಂಗಣದಲ್ಲಿ ಸಭಾ ಕಾರ್ಯಕ್ರಮವು ಪ್ರಾರಂಭವಾಯಿತು.

ಈ ಸಂದರ್ಭದಲ್ಲಿ ಜಿಲ್ಲಾಧಿಕಾರಿಗಳ ಕಛೇರಿ, ರಜತಾದ್ರಿ, ಮಣಿಪಾಲ, ಡಾ। ವಿ.ಎಸ್. ಆಚಾರ್ಯ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿ ನಗರ, ಸುಜ್ಲಾನ್ ಕೈಗಾರಿಕಾ ಆವರಣದಲ್ಲಿ ಸುಮಾರು 2000 ಸಸಿಗಳನ್ನು ನೆಡಲಾಯಿತು. ಈ ಎಲ್ಲಾ ಕಾರ್ಯಕ್ರಮದಲ್ಲಿ ಸುಮಾರು 900 ಕ್ಕಿಂತಲೂ ಹೆಚ್ಚಿನ ಸ್ಕೌಟ್ಸ್-ಗೈಡ್ಸ್, ರೋವರ್-ರೇಂಜರ್ ಗಳು ಹಾಗೂ ಶಿಕ್ಷಕರು ಭಾಗವಹಿಸಿದ್ದರು. ಭಾಗವಹಿಸಿದ ಎಲ್ಲಾ ಸ್ಕೌಟ್ಸ್-ಗೈಡ್ಸ್‌ಗಳಿಗೆ ಯು.ಪಿ.ಸಿ.ಎಲ್. ಅದಾನಿ ಸಂಸ್ಥೆಯವರಿಂದ ಉಚಿತ ಕೊಡೆ ಹಾಗೂ ಬ್ಯಾಗ್‌ಗಳನ್ನು ವಿತರಿಸಲಾಯಿತು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಪರಿಸರ ಇಲಾಖೆಯ ಅಧಿಕಾರಿಯಾದ ಡಾ। ಹೆಚ್. ಲಕ್ಷ್ಮೀಕಾಂತ ಇವರ ಸಹಕಾರದಿಂದ ಕಾರ್ಯಕ್ರಮವು ಯಶಸ್ವಿಯಾಗಿ ಮೂಡಿ ಬಂತು. ಜಿಲ್ಲಾ ಸಂಘಟಕಿಯಾದ ಶ್ರೀಮತಿ ಸುಮನ್ ಶೇಖರ್ ಕಾರ್ಯಕ್ರಮವನ್ನು ಸಂಘಟಿಸಿದರು.

## ವಿಜಯಪುರ



ಜೂನ್ 5 ರಂದು ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ ವಿಜಯಪುರದ ದೈಹಿಕ ಶಿಕ್ಷಣ ವಿಭಾಗದಿಂದ ದೈಹಿಕ ಶಿಕ್ಷಣ ಪ್ರಶಿಕ್ಷಣಾರ್ಥಿಗಳಿಗೆ ನಗರದ ಭೂತನಾಳ ಕೆರೆಯ ಪ್ರಾಂಗಣದಲ್ಲಿ ಹಮ್ಮಿಕೊಂಡಿದ್ದ ನಾಯಕತ್ವ ಹಾಗೂ ಮನೋಲ್ಲಾಸ ತರಬೇತಿ ಶಿಬಿರದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಜಿಲ್ಲಾ ಕಾರ್ಯದರ್ಶಿ ಶ್ರೀ ಪಿ.ಎಸ್. ಕುಂಬಾರ ಅತಿಥಿ ಉಪನ್ಯಾಸ ನೀಡಿದರು. ಬ. ಬಾಗೇವಾಡಿ ಕಾರ್ಯದರ್ಶಿ ಶ್ರೀ ಎಸ್.ಎಸ್. ಹುಬ್ಬಳ್ಳಿ ಇವರು ಉಪನ್ಯಾಸ ನೀಡಿ ಸಾಭಿನಯ ಗೀತೆ ಮತ್ತು ನೃತ್ಯದ ಬಗ್ಗೆ ತಿಳಿಸಿದರು. ಸರಕಾರಿ ಪ್ರೌಢಶಾಲೆ ನಾಗಠಾಣದ ಗೈಡ್ ಕ್ಯಾಪ್ಟನ್ ಡಾ। ಸಾವಿತ್ರಿ ಪಾಟೀಲ ಪಾಲ್ಗೊಂಡು ಮಹಿಳಾ ದೈಹಿಕ ಶಿಕ್ಷಣ ಶಿಕ್ಷಕಿಯರ ಸಮಸ್ಯೆಗಳು ಮತ್ತು ಸವಾಲುಗಳು ಎಂಬ ವಿಷಯದ ಮೇಲೆ ಉಪನ್ಯಾಸ ಮಂಡಿಸಿದರು.

# ಫಿಲ್‌ಮೌಂಟ್ ಸ್ಕೌಟ್ ರ್ಯಾಂಚ್ ರಾಷ್ಟ್ರೀಯ ತರಬೇತಿ ಶಿಬಿರ ಬಾಯ್ ಸ್ಕೌಟ್ಸ್ ಆಫ್ ಅಮೆರಿಕ



ಶ್ರೀ ಎಂ.ಎಸ್. ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು,
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಚಿಕ್ಕಮಗಳೂರು

ಹಿಂದಿನ ಸಂಚಿಕೆಯಿಂದ . . .

## ಫಿಲ್ ಮಾಂಟ್ ಇತಿಹಾಸ

ಜಿಕರಿಲ್ಲಾ ಅಪಾಚಿ ಮತ್ತು ಮೋಶೆ ಉತೆರೆಡ್ ಇಂಡಿಯನ್ ಪಂಗಡದ ಮೂಲವಾಸಿಗಳು ಜೀವಿಸುತ್ತಿದ್ದ ಈ ಫಿಲ್ ಮಾಂಟ್ ಪ್ರದೇಶ ಈ ಬುಡಕಟ್ಟು ಜನರ ಅನಾದಿ ಕಾಲದ ಆವಾಸಸ್ಥಾನವಾಗಿತ್ತು.ಈಗಿನ ಶಿಭಿರ ಪ್ರದೇಶದ ಕೆಲವು ಭಾಗಗಳು 1841 ರಲ್ಲಿ ಮೆಕ್ಸಿಕೊ ಸರ್ಕಾರದ ಬ್ಯೂಬಿಯನ್ ಮತ್ತು ಮಿರಾಂಡಾ ಭೂ ಸುಧಾರಣೆ ಮತ್ತು ಮಂಜೂರು ವಿಧೇಯಕದಡಿಯಲ್ಲಿ ಕಾರ್ಲೋಸ್ ಬೂಬಿಯನ್ ಮತ್ತು ಗಾಡಲೂಪೆ ಮಿರಾಂಡ ಇವರಿಬ್ಬರಿಗೆ ಮಂಜೂರು ಮಾಡಿಲಾಯಿತು. 1848 ರಲ್ಲಿ ಈ ಗುಡ್ಡಗಾಡು ವಾಸಿ ಬೂಬಿಯನ್‌ನ ಅಳಿಯ ಲೂಸಿಯನ್ ಮ್ಯಾಕ್ಸವೆಲ್ಲನ ನೇತೃತ್ವದಲ್ಲಿ ಮೊದಲು ವಲಸೆಗಾರರು ಬಂದು ಇಲ್ಲಿ ನೆಲೆಯೂರಿದರು.

ಮಾಕ್ಸ್‌ವೆಲ್ಲನು ಅವನ ಗೆಳೆಯ ಕಿಟ್‌ಕಾರ್ಸ್‌ನ್ ನೊಡಗೂಡಿ ರಯಾಡೋ ನದಿಯ ತಟದಲ್ಲಿ ನೆಲೆಯೂರಿ ಸಮೃದ್ಧವಾಗಿ ಬೆಳೆದನು. ಆಗಾಗ ಮೂಲವಾಸಿ ಇಂಡಿಯನ್ನರಧಾಳಿ ಹಾಗೂ ಪ್ರತಿಕೂಲ ಹವಾಮಾನವನ್ನು ಯಶಸ್ವಿಯಾಗಿ ಎದುರಿಸುತ್ತಾ ಇವರು ಆರ್ಥಿಕ ಮತ್ತು ಸಾಮಾಜಿಕವಾಗಿ ಬೆಳೆದರು. ನಂತರ 1857 ರ ಸುಮಾರಿಗೆ ಉತ್ತರಕ್ಕಿರುವ ಸಿಮರೂನ್ ನದಿಯ ಕಡೆಗೆ ತಮ್ಮ ಕಾವಲನ್ನು ಸ್ಥಳಾಂತರಿಸಿದರು. ಈ ಪ್ರದೇಶ ಅಂದಿನದಿನಗಳಲ್ಲಿ ಅಮೇರಿಕದಿಂದ ಮೆಕ್ಸಿಕೋಗೆ ಸಾಮಾನು ಸಾಗಿಸುತ್ತಿದ್ದ ಪ್ರಮುಖ ಮಾರ್ಗ "ಸಂತ ಫೆ" ಜಾಡಿನ ಮುಖ್ಯ ಕೇಂದ್ರವಾಗಿತ್ತು.



ಅಲ್ಲಿಂದ ಹತ್ತು ವರ್ಷಗಳನಂತರ ಈ ಜಮೀನಿನಲ್ಲಿ ಬಂಗಾರ ಪತ್ತೆಯಾಯಿತು. ಬಂಗಾರದ ಶೋಧಕ್ಕಾಗಿ ತಂಡ ತಂಡ ವಾಗಿ ಆಕಾಂಕ್ಷಿಗಳು ಧಾಳಿಯಿಟ್ಟರು. 1870 ರಲ್ಲಿ ಮಾಕ್ಸವೆಲ್ಲನು ಈ ಪ್ರದೇಶವನ್ನು ರೈಲ್ವೆ  ಹಾಗೂ ಜಮೀನು ಅಭಿವೃದ್ದಿ ಕಂಪನಿಗೆ ಮಾರಾಟ ಮಾಡಿದನು. ಕೆಲವು ವರ್ಷಗಳ ನಂತರ ಒಂದು ಡಚ್ ಕಂಪನಿಗೂ ಆಮೇಲೆ 1922 ರಲ್ಲಿ ಓಕ್ಲಹೋಮಾದ ತೈಲದೊರೆ ವೇಟ್ ಫಿಲಿಪ್ ಒಡೆತನಕ್ಕೆ ಬಂದಿತು, ವೈಟ್ ಫಿಲಿಪ್ ಹೈನುಗಾರಿಕೆಯಲ್ಲಿ ಆಸಕ್ತಿಯಿದ್ದವನಾದ್ದರಿಂದ ಆಜು ಬಾಜಿನ ತುಂಡು ಜಮೀನುಗಳನ್ನೆಲ್ಲಾ ಕೊಂಡು ಸುಮಾರು 3 ಲಕ್ಷ ಎಕರೆಗೆ ವಿಸ್ತರಿಸಿ "ಫಿಲ್ ಮಾಂಟ್ ರ್ಯಾಂಚ್" ಎಂದು ಹೆಸರಿಸಿದ. ಸ್ಪಾನಿಷ್ ಭಾಷೆಯಲ್ಲಿ 'ಮಾಂಟ್' ಎಂದರೆ ಪರ್ವತ.

ವೇಯಿಟ್ ಫಿಲಿಪ್.

ಫಿಲ್ ಮಾಂಟ್ ರ್ಯಾಂಚ್ ಒಂದು ಅತ್ಯಂತ ಆಕರ್ಷಕ ತಾಣವಾಗಿ ರೂಪುಗೊಂಡಿತು. ತನ್ನ ಕುಟುಂಬದ ಉಪಯೋಗಕ್ಕಾಗಿ ಒಂದು ಸುಂದರ ಸೌಧವನ್ನು ನಿರ್ಮಿಸಿದ. ಸಾಹಸ ಪ್ರೀಯನೂ ರಸಿಕನೂ ಆದ ಫಿಲಿಪ್ ಕುದುರೆ ಜಾಡು ಚಾರಣ ಪಥಗಳು, ಬೇಟೆಯ ತಾಣಗಳು, ಹೊರಸಂಚಾರ ರಸ್ತೆಗಳು, ಮೀನು ಹಿಡಿಯುವ ಸ್ಥಳಗಳು ಹೀಗೆ ಹತ್ತು ಹಲವು ಸೌಕರ್ಯಗಳೊಂದಿಗೆ ತನ್ನ ಎಸ್ಟೇಟನ್ನು ಒಂದು ಸೌಕರ್ಯದ ಗಣಿಯಾದ ಪ್ರವಾಸಿ ತಾಣವಾಗಿ ರೂಪಿಸಿದನು. ದೂರದೃಷ್ಠಿಯ ಕನಸುಗಾರನೂ ಮತ್ತು ಧಾರಾಳಿಯೂ ಆದ ಫಿಲಿಪ್‌ನು ತನ್ನ ಸಂತೋಷ ಮತ್ತು ಸಂಪತ್ತನ್ನು ಇತರರೊಡನೆ ಹಂಚಿಕೊಳ್ಳುವ ವಿಶಾಲ ಮನಸ್ಸಿನವನಾಗಿದ್ದನು. ಸ್ಕೌಟ್ ಚಟುವಟಿಕೆಗಳನ್ನು ಗಮನಿಸಿ ಅದರ ಕಾರ್ಯಕ್ರಮಗಳಿಂದ ಪ್ರಭಾವಿತನಾದ ವೇಟ್ ಫಿಲಿಪ್ 1938 ರಲ್ಲಿ 35857 ಎಕರೆ ಜಮೀನನ್ನು ಸ್ಕೌಟ್ ಸಂಸ್ಥೆಯ

ಉಪಯೋಗಕ್ಕಾಗಿ ನೀಡಿದನು. ನಂತರದ ದಿನಗಳಲ್ಲಿ ತನ್ನ ಕಣ್ಣೆದುರಿಗೆ ನಡೆಯುತ್ತಿದ್ದ ವೈವಿಧ್ಯಮಯ ಚಟುವಟಿಕೆಗಳನ್ನು ಅವಲೋಕಿಸುತ್ತಾ ಅದರಿಂದ ಎಷ್ಟು ಪ್ರಭಾವಿತನಾದನೆಂದರೆ, ತನ್ನ ಭವ್ಯವಾದ ಬಂಗಲೆ, ಮನರಂಜನಾ ತಾಣಗಳು ಎಲ್ಲವನ್ನೂ ಅಂದರೆ ಒಟ್ಟಾರೆ 1,27,395 ಎಕರೆ ಪ್ರದೇಶವನ್ನು ಸಂಸ್ಥೆಗೆ ಧಾರೆ ಎರೆದನು. ಅದಕ್ಕೆ "ಫಿಲ್ ಮಾಂಟ್ ಸ್ಕೌಟ್ ರ್‍ಯಾಂಚ್" ಎಂದು ನಾಮಕರಣ ಮಾಡಲಾಯಿತು.

ಇಷ್ಟು ಸಾಲದೆಂಬಂತೆ – ಈ ಅಗಾಧ ಪ್ರದೇಶದ ನಿರ್ವಹಣೆಗೆ ಬೇಕಾಗುವ ಆರ್ಥಿಕ ಅವಶ್ಯಕತೆಯನ್ನು ಶಿಬಿರಾರ್ಥಿಗಳ ಶುಲ್ಕದಿಂದಲೆ ಮಾಡಬೇಕಾದ ಪಕ್ಷದಲ್ಲಿ ಅವರಿಗೆ ಹೊರೆಯಾಗುತ್ತದೆ ಎನ್ನುವ ಉದ್ದೇಶದಿಂದ ತುಲ್ಸಾ ನಗರದಲ್ಲಿದ್ದ ತನ್ನ 23 ಅಂತಸ್ಥಿನ ಕಟ್ಟಡವನ್ನು ತನ್ನ ದಾನಪತ್ರದಲ್ಲಿ ಸೇರಿಸಿದ!

1963 ರಲ್ಲಿ ಬಾಯ್ ಸ್ಕೌಟ್ಸ್ ಆಫ್ ಅಮೇರಿಕದ ಉಪಾಧ್ಯಕ್ಷರಾಗಿದ್ದ 'ನಾರ್ಟನ್ ಕ್ಲಾಪ್' ರವರ ಕೊಡುಗೆಯಾಗಿ ಇನ್ನೂ 10,098 ಎಕರೆ ಈ ಶಿಭಿರದ ವಿಸ್ತೀರ್ಣಕ್ಕೆ ಸೇರ್ಪಡೆಯಾಯಿತು. ಹಾಗಾಗಿ ಈಗ ಈ ಶಿಭಿರದ ಒಟ್ಟು ವಿಸ್ತೀರ್ಣ 1,37,493(556.41sq km) ಎಕರೆ ಆಗಿದೆ.

## ಕ್ಯಾಂಪಿಂಗ್


ರ್‍ಯಾಂಚಿನ ವಿಹಂಗಮ ನೋಟ

1939 ರಲ್ಲಿ ಪ್ರಾರಂಭವಾದ ಫಿಲ್ ಮಾಂಟ್ ರಾಷ್ಟ್ರೀಯ ತರಬೇತಿ ಕೇಂದ್ರದಲ್ಲಿ ಇಲ್ಲಿಯ ತನಕ 9,30,000 ಕ್ಕೂ ಹೆಚ್ಚು ಶಿಭಿರಾರ್ಥಿಗಳು ಇಲ್ಲಿ ತಂಗಿ ಅನುಭವ ಪಡೆದಿದ್ದಾರೆ. ಪ್ರತಿವರ್ಷ ಜೂನ್ ಮೊದಲವಾರದಿಂದ ಶುರುವಾಗಿ ಆಗಸ್ಟ್ ಕೊನೆಯುವರೆಗೆ ಅನುಕೂಲಕರವಾದ ಹವಾಗುಣ-ವಿರುವುದರಿಂದ ಹತ್ತಾರು ಕಾರ್ಯಕ್ರಮಗಳಿಂದ ಇಡೀ ಕೇಂದ್ರ ನಳನಳಿಸುತ್ತಿರುತ್ತದೆ. 14 ವರ್ಷ ಮೇಲ್ಪಟ್ಟವರಿಗೆ 5 ರಿಂದ 6 ದಿನಗಳ ವಿವಿಧ, ವೈವಿಧ್ಯಮಯ ಕಾರ್ಯಕ್ರಮಗಳು. ಕುದುರೆ ಸವಾರಿ, ಬರೋ ಪ್ಯಾಕಿಂಗ್ (ಮ್ಯೂಲ್ ಅಥವಾ ಕತ್ತೆಗಳ ಮೇಲೆ ಡೇರೆ ಹೂಡಲು ಅವಶ್ಯಕ ವಸ್ತುಗಳನ್ನು ಒಯ್ಯುವುದು) ಬಂಗಾರ ಜಲಿಸಿ ಬೇರ್ಪಡಿಸುವುದು, ಬಂಡೆ ಹತ್ತುವುದು, ಕೋವಿಯಲ್ಲಿ ಗುರಿಯಿಡುವ ಅಭ್ಯಾಸ, ಪ್ರಾಚ್ಯ ವಸ್ತು ಶೋಧನೆ, ಬಿಲ್ಲುಗಾರಿಕೆ, ಗುಡ್ಡಗಾಡು ಮೋಟಾರ್ ಸೈಕಲ್ ಚಾಲನೆ ಮತ್ತು ಬೈಕ್ ಯಾತ್ರೆಗಳು, ಜಾಡು ಶೋಧಿಸುವುದು **(wood craft trailing)** ನಿಧಿ ಶೋಧಿಸುವುದು **(Treasure hunt)** ಸ್ಕೀಯಿಂಗ್ (ಹಿಮದ ಮೇಲೆ ಚಲಿಸುವುದು) ಹೀಗೆ ಹತ್ತು ಹಲವು ಕಾರ್ಯಕ್ರಮಗಳು ನಡೆಯುತ್ತವೆ ಆಸಕ್ತಿ ಇರುವವರು **Philmont training centre.org** ಅಥವಾ ಫೋನ್. 5753762281 ಸಂಪರ್ಕಿಸಬಹುದು.


ಮಂಜಿನ ಮೇಲೆ ಸ್ಕೀಯಿಂಗ್ ಮಾಡುವುದು


ಹಾರ್ಸ್ ರೈಡಿಂಗ್

## ತರಬೇತಿ

1950 ರಿಂದ ಈ ಕ್ಯಾಂಪನ್ನು ಸ್ಕೌಟ್ ನಾಯಕರ ರಾಷ್ಟ್ರೀಯ ತರಬೇತಿ ಕೇಂದ್ರವಾಗಿ ಕೂಡಾ ಬಳಸಲಾಗುತ್ತಿದೆ. ಸಂಘಟನೆಯ ವಿವಿಧ ನಾಯಕರುಗಳು ಹಾಗೂ ಅಧಿಕಾರ ವರ್ಗದವರಿಗೆ ಪ್ರತಿ ಬೇಸಿಗೆಯಲ್ಲಿ ಸುಮಾರು 80ಕ್ಕೂ ಹೆಚ್ಚು ತರಬೇತಿಗಳು, ಗೋಷ್ಠಿಗಳು, ಸಮಾವೇಶಗಳು, ಸಮ್ಮೇಳನಗಳು ನಡೆಯುತ್ತವೆ. ನಾಯಕರುಗಳ ಕುಟುಂಬದವರಿಗೂ ವಿವಿಧ ಚಟುವಟಿಕೆಗಳಿರುತ್ತವೆ.



ಮುಂದುವರೆಯುವುದು...



# THE BHARAT SCOUTS & GUIDES

# भारत स्काउट्स एवं गाइड्स

*National Headquarters* राष्ट्रीय मुख्यालय

Phones : 91-11-23370724, 23378667, 23378702, Fax : +91-11-23370126

E-mail: info@bsgindia.org, Website : www.bsgindia.org

PRESIDENT: DR. ANIL KUMAR JAIN अध्यक्ष : डॉ. अनिल कुमार जैन

CHIEF NATIONAL COMMISSIONER : मुख्य राष्ट्रीय आयुक्त :

Ref. No. B.S.G./N.H.Q./ D-7-20/758/2017-18 Dated: 31/5/2017

**<u>"CONDOLENCE MESSAGE"</u>**

We are shocked to hear the sudden demise of Mrs. S.K.Prabha, Leader Trainer (Guides) & Joint State Secretary of Bharat Scouts & Guides, Karnataka State on Tuesday i.e. 30.05.2017.

I, on behalf of 5.7 million members of the Bharat Scouts & Guides deeply mourn the sad demise and convey our heartfelt condolences.

This is an irreparable loss to her family and the entire Scouting & Guiding fraternity in Karnataka State and The Bharat Scouts & Guides as a whole.

We the members of the Bharat Scouts & Guides stand with Karnataka State Association at this time of grief.

We all pray for the departed soul to rest in Peace, and give strength to the members of her family to bear the irreparable loss.

**(KRISHNASWAMY.R)**
**OFFICIATNG DIRECTOR**
**&**
**ALL STAFF OF BS&G NHQ**

**To,**
**The State Secretary**
**Bharat Scouts & Guides**
**Karnataka State Headquarters**
**<u>Shanthi Gruha, Bangalore-01</u>**

**Copy to: Assistant Director, BS&G Southern Region. He is requested to convey our Condolence Message.**



Lakshmi Mazumdar Bhawan, 16, Mahatma Gandhi Marg, I.P. Estate, POST BOX NO. 7043, New Delhi-110 002 (India)

लक्ष्मी मजूमदार भवन, 16, महात्मा गाँधी मार्ग, इन्द्रप्रस्थ एस्टेट, पोस्ट बॉक्स न. 7043, नई दिल्ली–110002 (भारत)

## ನುಡಿನಮನ



**ಶ್ರೀಮತಿ ಎಸ್.ಕೆ. ಪ್ರಭಾರವರು** ಸರಳರು, ಸಜ್ಜನರು, ಉತ್ತಮ ವಾಗ್ಮಿಗಳು, ಸುಲಲಿತವಾಗಿ ಭಾಷೆಗಳನ್ನು ಬಳಸುತ್ತಿದ್ದರು. ಕೌಶಲಾತ್ಮಕವಾಗಿ, ಕ್ರಿಯಾಶೀಲರಾಗಿದ್ದರು, ಸದಾ ಚಟುವಟಿಕೆಯಿಂದ ಕೂಡಿದ್ದರು. 1972 ರಲ್ಲಿ ಸರ್ಕಾರಿ ಪ್ರೌಢಶಾಲೆ, ಭದ್ರಾವತಿಯಲ್ಲಿ ಉತ್ತಮ ಗೈಡ್ ಶಿಕ್ಷಕಿಯಾಗಿ ಮಕ್ಕಳನ್ನು ರಾಷ್ಟ್ರಮಟ್ಟದ ವರೆಗೂ ಭಾಗವಹಿಸಲು ತರಬೇತಿಯನ್ನು ನೀಡಿದ್ದು ಶ್ಲಾಘನೀಯ. ತರಬೇತಿ ನಾಯಕಿಯಾಗಿ ಸಾವಿರಾರು ಸಹೋದರಿಯರಿಗೆ ವಿಶೇಷವಾಗಿ ತರಬೇತಿ ನೀಡಿ ಎಲ್ಲರ ಮನದಲ್ಲಿ ಅಚ್ಚಳಿಯದೇ ಉಳಿದಿದ್ದಾರೆ.

ಸದಾ ಲೇಖನ, ಬರವಣಿಗೆ, ಕೈಪಿಡಿ ಸಿದ್ಧಪಡಿಸುವುದು, ಪುಸ್ತಕ ರಚಿಸುವ ಹವ್ಯಾಸಿಯಾದ ಇವರು ತಮ್ಮ ಜ್ಞಾನಭಂಡಾರವನ್ನು ಎಲ್ಲರೊಂದಿಗೆ ಹಂಚಿಕೊಂಡಿರುವ ಅಪರೂಪದ ಸಹೋದರಿಯಾಗಿದ್ದರು. ರಾಷ್ಟ್ರೀಯ, ಅಂತರ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಭಾಗವಹಿಸಿ ಯಶಸ್ವಿಯಾಗಿರುವ ಇವರಿಗೆ ಗೈಡಿಂಗ್ ಎಂದರೆ ಪ್ರಾಣ. ಕೇಂದ್ರ ಸ್ಥಾನಿಕ ತರಬೇತಿ ಆಯುಕ್ತರು (ಗೈ) ತರಬೇತಿ ನಡೆಯುವ ಬೇಟಿಕೊಟ್ಟು ಶಿಬಿರಕ್ಕೆ ಅನೇಕ ಸ್ಕೌಟ್-ಗೈಡ್ ವಿಷಯಗಳ ಬಗ್ಗೆ ತಿಳುವಳಿಕೆ ನೀಡುತ್ತಿದ್ದರು. ಇವರ 51 ವರ್ಷಗಳ ಸಾರ್ಥಕ ಜೀವನ ಗೈಡಿಂಗ್ ಸೇವೆಗಾಗಿ ರಾಷ್ಟ್ರ ಸಂಸ್ಥೆಯವರು ಗುರುತಿಸಿ ಸಿಲ್ವರ್ ಸ್ಟಾರ್ ಮತ್ತು ಬಾರ್ ಟು ಸಿಲ್ವರ್ ಸ್ಟಾರ್ ಪ್ರಶಸ್ತಿಯನ್ನು ಶ್ರೀಮತಿ ಪ್ರತಿಭಾ ದೇವಿ ಸಿಂಗ್ ಪಾಟೀಲ್ ಮತ್ತು ಶ್ರೀ ಪ್ರಣಬ್ ಮುಖರ್ಜಿ, ರಾಷ್ಟ್ರಪತಿಗಳಿಂದ ಪ್ರಶಸ್ತಿ ಸ್ವೀಕರಿಸಿರುವುದು, ಇವರ ಗೈಡಿಂಗ್ ಸೇವೆಯನ್ನು ಎತ್ತಿ ಹಿಡಿಯುತ್ತದೆ.

ವಿವಿಧ ಸಂಘ ಸಂಸ್ಥೆಗಳಲ್ಲಿ ತೊಡಗಿಸಿಕೊಂಡು, ಸಮಾಜ ಸೇವೆಯನ್ನು ಉಸಿರಾಗಿಸಿಕೊಂಡಿದ್ದರು. ವಿಶೇಷ ಚಿಂತನಾಶೀಲರಾಗಿದ್ದ ಇವರಿಂದ ಹೊರಹೊಮ್ಮಿದ "ಪ್ರೇರಣ ರೇಂಜರ್ಸ್ ಕಾರ್ಯಕ್ರಮ" ರಾಜ್ಯಾದ್ಯಂತ ಶ್ಲಾಘಿಸಲ್ಪಟ್ಟಿರುರುವುದು ಗಮನಾರ್ಹ, ವಿಶ್ವ ಗೈಡ್ ಸಂಸ್ಥೆಯ "ಫ್ರೀ ಬೀಯಿಂಗ್ ಮೀ" (ಮುಕ್ತವಾಗಿ ನಮ್ಮನ್ನು ನಾವು ಗುರುತಿಸುವ ಬಗ್ಗೆ). ಈ ವಿಷಯದ ಬಗ್ಗೆ ಸಾವಿರಾರು ಗೈಡ್ಸ್, ರೇಂಜರ್ಸ್ ಮತ್ತು ಶಿಕ್ಷಕಿಯರಿಗೆ ಉಪನ್ಯಾಸ ನೀಡಿ ಎಲ್ಲರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದ್ದಾರೆ.

ರಾಜ್ಯ ಮತ್ತು ರಾಷ್ಟ್ರೀಯ ಸಂಸ್ಥೆಯಲ್ಲಿ ವಿಶೇಷ ಗೌರವಕ್ಕೆ ಪಾತ್ರರಾದ ಶ್ರೀಮತಿ ಎಸ್.ಕೆ. ಪ್ರಭಾ ತಮ್ಮ ಪ್ರತಿಭೆಯ ಪ್ರಭೆಯನ್ನು ಬೀರಿ ಎಲ್ಲರ ಮನಸ್ಸಿನಲ್ಲಿ ಹಸಿರಾಗಿದ್ದಾರೆ. ಇವರಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆ, ರಾಜ್ಯದ ಎಲ್ಲ ಸ್ಕೌಟ್ಸ್-ಗೈಡ್ಸ್ ಮತ್ತು ಪದಾಧಿಕಾರಿಗಳ ಪರವಾಗಿ ನುಡಿನಮಗಳನ್ನು ಅರ್ಪಿಸುತ್ತ ಮೇ 30, 2017ರಂದು ದೈವಾದೀನರಾದ ಎಸ್.ಕೆ. ಪ್ರಭಾ ಅವರ ಆತ್ಮಕ್ಕೆ ಚಿರ ಶಾಂತಿಯನ್ನು ಕೋರಿ ಅವರ ಕುಟುಂಬ ವರ್ಗಕ್ಕೆ ದುಃಖವನ್ನು ಭರಿಸವು ಶಕ್ತಿಯನ್ನು ಭಗವಂತ ದಯಪಾಲಿಸಲೆಂದು ಈ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ.

**ಇವರು ಬರೆದ ಪುಸ್ತಕಗಳು**

1. ಶಿಕ್ಷಕರಿಗೆ ಮೂಲ ತರಬೇತಿ ಕೈಪಿಡಿ.
2. ಗರ್ಲ್ ಗೈಡ್ ಮಾರ್ಗದರ್ಶಿ
3. ಗುರು ನೀತಿ ನಿಯಮ ಮತ್ತು ಸಂಘಟನೆ
4. ಬೇಡನ್ ಪಾವೆಲ್ ರವರ ಆತ್ಮಕಥೆ
5. ದಿನಚರಿ ಭಾಗ-1 ಭಾಗ-2 ಸ್ಕೌಟ್-ಗೈಡ್‌ಗಳಿಗೆ
6. ಲೋಕಮಾನ್ಯ ಲೇಡಿ ಆಲೇವ್ ಬೇಡನ್ ಪಾವೆಲ್ ರವರ ಜೀವನ ಮತ್ತು ಸಾಧನೆ

27ನೇ ಸ್ಕೌಟ್-ಗೈಡ್ ಜಾಂಬುರೇಟ್ 17ನೇ ಜಾಂಬುರಿಯಲ್ಲಿ ಮಕ್ಕಳಿಗಾಗಿ ರಸಪ್ರಶ್ನೆ, ಚರ್ಚಾಸ್ಪರ್ಧೆ, ಆಶುಭಾಷಣ, ಪ್ರಬಂಧ ಸ್ಪರ್ಧೆ, ವಿನೋದ ಆಟಗಳು ಮುಂತಾದವುಗಳನ್ನು ಏರ್ಪಡಿಸಿ ಅವರ ಪ್ರತಿಭೆಗಳನ್ನು ಗುರ್ತಿಸುತ್ತಿದ್ದರು. 17ನೇ ಜಾಂಬೂರಿಯಲ್ಲಿ ವಿಶೇಷವಾಗಿ, ವಸ್ತುಪ್ರದರ್ಶನ ವಿಜ್ಞಾನ ವಿಭಾಗ, ವಾರ್ತಾ ಇಲಾಖೆ, ರೇಷ್ಮೆ ಇಲಾಖೆ ಭೂ ಸೈನ್ಯದ ಆಯುಧಗಳು, ವಾಯು ಸೈನ್ಯದ ಆಯುಧಗಳ ಪ್ರದರ್ಶನ ಮುಂತಾದ ಪ್ರದರ್ಶನದ ಬಗ್ಗೆ ಆಸಕ್ತಿಯಿಂದ ಭೇಟಿ ಮಾಡಿದರು.

# ನುಡಿನಮನ

ಸುಪ್ರಭಾತದ ಸುದಿನದ ಪ್ರಭೆಯೊಂದು
ಪ್ರಭಾ (ಎಸ್.ಕೆ.) ಳಾಗಿ ಜನ್ಮ ತಳೆಯಿತಂದು
ಪುಟ್ಟ ಕಂದಮ್ಮ ತಂದೆ-ತಾಯಿಯರ ಮುದ್ದು ಮಡಿಲಿನಲಿ
ಸ್ವಾತಂತ್ರ್ಯ ಕಹಳೆಗೆ ನಾಂದಿಯಾಗಿ ಸೆರೆಮನೆಯ ವಾಸದಲಿ ॥

ಭಯಭೀತಿ ಬಡಿದಟ್ಟಿ ಬೆಳೆದು ದಿಟ್ಟ ಮಹಿಳೆ ತಾನಾಗಿ
ಬೆಟ್ಟ, ಬಯಲು, ಹಳ್ಳಿ, ನಗರಗಳು ವೃತ್ತಿ ಜೀವನವಾಗಿ
ಶಿಕ್ಷಕಿಯ ಆದರ್ಶ, ಜ್ಞಾನ ಮೇಳೈಸಿ ನವಿರಾಗಿ
ವಿಜ್ಞಾನ ಲೋಕದ ಸುಜ್ಞಾನ ದಿನ ನಿತ್ಯ ಬದುಕಿನ ಆಸರೆಯಾಗಿ ॥

ಆಡುನುಡಿದ ಮಾತುಗಳೇ ಕವನ - ಸಾಹಿತ್ಯದತ್ತ
ಸೇವೆ ಕೈಂಕರ್ಯಕೆ 'ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯತ್ತ
ಅದರ ಚಳವಳಿಯ ಗುರಿಯತ್ತ ಅವರ ಚಿತ್ತ
ಕಳೆದ ದಿನಗಳಷ್ಟೂ ಸಾರ್ಥಕ ಸಾಧನೆಯತ್ತ

ಶಿಬಿರದಲಿ, ಜಾಂಬೂರಿಯಲ್ಲಿ ಜಿಂಕೆಮರಿ
ಸಮರಸದ ನಗುವಿನಲಿ ಸಂತಸದ ಗರಿ
ನಿಮಗಿಲ್ಲ ಸಮನಾರು ನಮ್ಮ ಪರಿಸರದಲಿ
ನಿಮ್ಮ ಪ್ರತಿಭೆಗೆ ಬೇರಿನ್ನಾರು ಸಾಟಿ?

ಅಚ್ಚಗನ್ನಡದ ಅಭಿಮಾನಿ
ಲೇಖನಿಯ ಬರವಣಿಗೆಗವರು ಕಣ್ಮಣಿ
ಮಹಿಳೆಯರ ಸಬಲೀಕರಣದ ಅಭಿಮಾನಿ
ಸ್ವರವೆತ್ತಿ ಸಾಗಿದ ಕಡು ಸ್ವಾಭಿಮಾನಿ

ಸಾವಿನ ಬಾಗಿಲನೂ ಧೀರತೆಯಲಿ ತಟ್ಟಿದಾಕೆ
ತ್ಯಾಗದಿಂದಲಿ ದೇಹ ಮುಡಿಪಾಯ್ತು ಜ್ಞಾನ ದೇಗುಲಕೆ
ನಮ್ಮೆಲ್ಲರ ಮನದಂಗಳದಿ ಶಾಶ್ವತದಿ ನೆಲೆನಿಂತು ಬೆಳಗಿದಿರಿ
ಎನಿತೊ ಮಕ್ಕಳ ಬದುಕು ಕಟ್ಟಿದಿರಿ, ಜನರ ಹೃದಯ ತಟ್ಟಿದಿರಿ

ಓ ಪ್ರಿಯ ಸೋದರಿ, ಮಗದೊಮ್ಮೆ ಹುಟ್ಟಿ ಬನ್ನಿ,
ಈ ಶಾಂತಿಗೃಹದ ಹಸಿರ ಶಾಂತಿ ಧಾಮಕೆ
ನಿಮಗಿದೊ ನಮ್ಮೆಲ್ಲರ **"Great Salute"** ವಂದನೆಗಳು,
ಅಂತಿಮದ ಶ್ರದ್ಧಾಂಜಲಿ ನುಡಿನಮನ ಸ್ಮರಣೆಗಳು

**- ಕಮಲಾಕ್ಷಿ ಹೆಗಡೆ**
**ಬೆಂಗಳೂರು ಉತ್ತರ ಜಿಲ್ಲೆ**

ಕರ್ನಾಟಕ ಪ್ರಾಥಮಿಕ ಶಾಲೆಯ 5ನೇ ತರಗತಿಯ "ಪರಿಸರ ಅಧ್ಯಯನ" ಪಠ್ಯ ಪುಸ್ತಕದ ರಕ್ಷಾ ಪುಟಗಳಲ್ಲಿ ಸ್ಕೌಟ್ಸ್-ಗೈಡ್ಸ್ ಚಳವಳಿಯ ಬಗ್ಗೆ ಮುದ್ರಿಸಲಾಗಿದೆ. ಈ ಭಾಗವನ್ನು ಅಳವಡಿಸಲು ದಿವಂಗತ ಎಸ್.ಕೆ. ಪ್ರಭಾರವರು ಶ್ರಮವಹಿಸಿದ್ದಾರೆ.



# ಸ್ಕೌಟ್ಸ್-ಗೈಡ್ಸ್ ಚಳವಳಿ





"ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ".

...ಮಹಾತ್ಮಗಾಂಧಿ

**ಸ್ಕೌಟ್ಸ್-ಗೈಡ್ಸ್‌ಗೆ ಸೇರಿ :** ಕಾಡಲ್ಲಿ ಸುತ್ತಾಡಬೇಕೆ! ಬೆಟ್ಟ/ಗುಡ್ಡ ಹತ್ತಬೇಕೆ! ಚಾರಣಕ್ಕೆ ಹೋಗಬೇಕೆ! ಸಾಹಸ ಮಾಡಬೇಕೆ! ಆಟ ಆಡಬೇಕೆ! ಮಸ್ತ್‌ಮಜಾ ಮಾಡಬೇಕೆ! ಶಿಸ್ತಿನ ಸಿಪಾಯಿಗಳಾಗಬೇಕೆ! ಆರೋಗ್ಯವಂತರಾಗಿರಬೇಕೆ! ಬುದ್ಧಿವಂತರಾಗಬೇಕೆ! ಎಲ್ಲರೊಂದಿಗೆ ಒಂದಾಗಿ ಬದುಕಬೇಕೆ! ಒಳ್ಳೆಯ ಜೀವನ ನಡೆಸಬೇಕೆ! ದೇಶ ಸೇವೆ ಮಾಡಬೇಕೆ! ಹಕ್ಕಿಯಂತೆ ಹಾರಬೇಕೆ! ಮೀನಿನಂತೆ ಈಜಬೇಕೆ! ಮನುಷ್ಯರಾಗಿ ಬದುಕಬೇಕೆ! ದೇಶ ಸುತ್ತಾಡಬೇಕೆ! ವಿದೇಶಕ್ಕೆ ಹೋಗಬೇಕೆ! ನಿಮ್ಮ ಪ್ರತಿಭೆ ಬೆಳೆಸಿಕೊಳ್ಳಬೇಕೆ! ಬದುಕಿನ ಕಲೆ ಕಲಿಯಬೇಕೆ! ಇಷ್ಟೆಲ್ಲಾ ಅವಕಾಶಗಳು ಇರುವುದರಿಂದಲೇ ಗಾಂಧೀಜಿ ಹಾಗೂ ಅನೇಕ ಗಣ್ಯರು ಸ್ಕೌಟ್ಸ್-ಗೈಡ್ಸ್‌ಗೆ ಮಕ್ಕಳು ಸೇರಬೇಕು. ಮಕ್ಕಳು ಒಳ್ಳೆಯ ರೀತಿಯಲ್ಲಿ ಬೆಳೆಯಬೇಕು. ಒಳ್ಳೆಯ ಜೀವನ ನಡೆಸಬೇಕು. ಇದರಿಂದ ರಾಷ್ಟ್ರವು ಅಭಿವೃದ್ಧಿಯಾಗುವುದರಲ್ಲಿ ಸಂಶಯವಿಲ್ಲ ಎಂದಿದ್ದಾರೆ.

**ಚಳವಳಿಯ ಹಿನ್ನೆಲೆ :** ಸ್ಕೌಟ್ಸ್-ಗೈಡ್ಸ್ ಯುವ ಚಳವಳಿಯನ್ನು ಸಂಶೋಧಿಸಿ ಬಿತ್ತಿ ಬೆಳೆಸಿದವರು **ಲಾರ್ಡ್ ಬೇಡನ್ ಪಾವೆಲ್**. ಅವರು 1876 ರಲ್ಲಿ ವಿದ್ಯಾಭ್ಯಾಸ ಮುಗಿಸಿ ಸೈನ್ಯಕ್ಕೆ ಸೇರಿದರು. ಅವರು ಬಾಲ್ಯದಿಂದಲೇ ಬೆಳೆಸಿಕೊಂಡ ಪ್ರಕೃತಿಯ ಒಡನಾಟ, ಧೈರ್ಯ, ಸಾಹಸ, ಪ್ರತಿಭೆ, ಜಾಣ್ಮೆಗಳು ಸೈನ್ಯದ ಪರೀಕ್ಷೆಯಲ್ಲಿ ಮತ್ತು ವೃತ್ತಿಯಲ್ಲಿ ಉನ್ನತ ಸ್ಥಾನ ದೊರಕಿಸಿಕೊಟ್ಟಿತು.

**ಚಳವಳಿಯ ಪ್ರಾರಂಭ :** ಬೇಡನ್ ಪಾವಲ್‌ರವರು ಭಾರತದಲ್ಲಿ ಸೇವೆ ಸಲ್ಲಿಸಿ ನಂತರ ದಕ್ಷಿಣ ಆಫ್ರಿಕಾಕ್ಕೆ ವರ್ಗವಾದರು. ದಕ್ಷಿಣ ಆಫ್ರಿಕಾದಲ್ಲಿ ಬೋಯರ್ಸ್‌ಗಳೊಡನೆ ಮೇಫ್‌ಕಿಂಗ್ ನಗರದಲ್ಲಿ ಯುದ್ಧ ಮಾಡಿದರು. ಸೈನಿಕರ ಸಂಖ್ಯೆ ಕಡಿಮೆ ಇತ್ತು ಅದೇ ನಗರದ ಬ್ರಿಟಿಷ್ ಗಂಡು ಮಕ್ಕಳ ಒಂದು ಪಡೆಯನ್ನು ರಚಿಸಿ, ತರಬೇತಿ ನೀಡಿ ಯುದ್ಧ ಭೂಮಿಯಲ್ಲಿ ದೂತ ಸೇವೆ ಮಾಡಲು ನೇಮಕ ಮಾಡಿದರು.

ಈ ಪಡೆ ಉತ್ಸಾಹದಿಂದ ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸಿತು. ಬೇಡನ್ ಪಾಲವ್‌ರವರು ಈ ಪಡೆಯ ಸೇವೆಯನ್ನು ಮೆಚ್ಚಿದರು. ಬಾಲಕರಿಗೇಕೆ ಸ್ಕೌಟಿಂಗ್ ತರಬೇತಿ ನೀಡಬಾರದು ಎಂಬ ವಿಚಾರ ಅವರ ಮನಸ್ಸಿನಲ್ಲಿ ಅಂಕುರಿಸಿತು. ಈ ವಿಚಾರವನ್ನು ಕಾರ್ಯರೂಪಕ್ಕೆ ತಂದು ಲಂಡನ್ನಿನ ಬ್ರೌನ್ಸೀ ದ್ವೀಪದಲ್ಲಿ 1907 ರಲ್ಲಿ 20 ಗಂಡು ಮಕ್ಕಳಿಗೆ ಪ್ರಾಯೋಗಿಕವಾಗಿ ತರಬೇತಿ ನೀಡಿದರು. ಪ್ರಯೋಗ ಯಶಸ್ವಿಯಾಯಿತು. ಸ್ಕೌಟಿಂಗ್ ಆರಂಭವಾಯಿತು. ಇದನ್ನು ಅನುಸರಿಸಿ ಗೈಡಿಂಗ್ ಆರಂಭವಾಯಿತು. ಇಂದು ಈ ಚಳವಳಿ ವಿಶ್ವದಾದ್ಯಂತ ಬೆಳೆದು 110 ವರ್ಷಕ್ಕೆ ಕಾಲಿಟ್ಟಿದೆ.

**ಚಳವಳಿಗೆ ಸೇರುವ ವಿಧಾನ :** ಇದಕ್ಕೆ ಸೇರಲು ನಿಮ್ಮ ಶಾಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ದಳ ತೆರೆದಿರಬೇಕು ಮತ್ತು ದಳ ನೋಂದಣಿಯಾಗಿರಬೇಕು. ಇದಕ್ಕಾಗಿ ಸ್ಕೌಟ್ಸ್-ಗೈಡ್ಸ್ ತರಬೇತಿ ಪಡೆದ ಶಿಕ್ಷಕ/ಶಿಕ್ಷಕಿಯರು ಇರಬೇಕು. 10 ರಿಂದ 16 ವರ್ಷದ ಗಂಡು ಮಕ್ಕಳಿಗೆ ಸ್ಕೌಟ್ಸ್ ತರಬೇತಿ, ಹೆಣ್ಣು ಮಕ್ಕಳಿಗೆ ಗೈಡ್ಸ್ ತರಬೇತಿ ಇರುತ್ತದೆ. ಮೊದಲ ಹಂತ-ಪ್ರವೇಶ ಪರೀಕ್ಷೆಯಲ್ಲಿ ಚಳವಳಿಯ ಪರಿಚಯ ಮಾಡಿಕೊಂಡು, ಪ್ರತಿಜ್ಞೆಯನ್ನು ಧ್ವಜದಡಿ ನಿಮ್ಮ ಶಿಕ್ಷಕ/ಶಿಕ್ಷಕಿಗೆ ನೀಡಿ ಅವರಿಂದ ಸದಸ್ಯತ್ವ ಪದಕ ಪಡೆಯಬೇಕು. ನೀವು ನಿಮ್ಮ ಶಾಲೆಯಲ್ಲಿ ಸದಸ್ಯರಾದರೆ ವಿಶ್ವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೂ ಸದಸ್ಯರಾದಂತೆ. ಒಮ್ಮೆ ಪ್ರತಿಜ್ಞೆ ಮಾಡಿದರೆ ಜೀವನ ಪರ್ಯಂತ ಸದಸ್ಯರಾಗಿರುವಿರಿ.

**ಸ್ಕೌಟ್ಸ್-ಗೈಡ್ಸ್ ಎಂದರೆ**

ಅಂತರರಾಷ್ಟ್ರೀಯ, ಸ್ವಯಂಸೇವಾ, ಶಿಕ್ಷಣಪೂರಕ, ರಾಜಕೀಯ ಮುಕ್ತ, ಯಾವ ಬೇಧವೂ ಇಲ್ಲದ ಯುವ ಚಳವಳಿ.

**ಸ್ಕೌಟ್ಸ್-ಗೈಡ್ಸ್ ಉದ್ದೇಶ**

ಮಕ್ಕಳನ್ನು ಜವಾಬ್ದಾರಿಯುತ, ಆರೋಗ್ಯಕರ, ಆನಂದದಾಯಕ, ಉಪಯುಕ್ತ, ಪ್ರಜೆಗಳನ್ನಾಗಿ ನಿರ್ಮಾಣ ಮಾಡುವುದು.

**ಸ್ಕೌಟ್ಸ್-ಗೈಡ್ಸ್ [illegible]**

ಚಾರಿತ್ರ್ಯ-ಮೌಲ್ಯ, ಬುದ್ಧಿಶಕ್ತಿ, ಆರೋಗ್ಯ, ಕರಕುಶಲ, ಸೇವಾ ಮನೋಭಾವ, ಸಾಹಸಗಳ ಅಭಿವೃದ್ಧಿ.

**[illegible]**

ದೇಶಪ್ರೇಮ, ಶಿಬಿರವಾಸ, ಪ್ರಥಮ ಚಿಕಿತ್ಸೆ, ನಕ್ಷಾ ಕೌಶಲ, ಅಳತೆ ಅಂದಾಜು, ಹಗ್ಗ ಕೌಶಲ, ಪ್ರಕೃತಿ ಒಡನಾಟ, ಚಾರಣ, ಅನ್ವೇಷಣೆ, ಪರ್ವತಾರೋಹಣ, ಕವಾಯತು, ಅನುಶಾಸನ, ಮನರಂಜನೆ, ಪ್ರತಿಭಾ ಪೋಷಣೆ.

**ಧ್ಯೇಯ**

ಸದಾ ಸಿದ್ಧ ಕರ್ತವ್ಯಕ್ಕೆ, ಸೇವೆಗೆ, ಸಮಸ್ಯೆ ಪರಿಹಾರಕ್ಕೆ, ಸವಾಲೆದುರಿಸಲು.

ಪ್ರಗತಿಪರ ತರಬೇತಿ : ಸದಸ್ಯತ್ವ ಪಡೆದ ಮೇಲೆ 5 ಹಂತಗಳಲ್ಲಿ ತರಬೇತಿಯನ್ನು ಪಡೆಯಬೇಕು. 1. ಪ್ರಥಮ ಸೋಪಾನ 2. ದ್ವಿತೀಯ ಸೋಪಾನ 3. ತೃತೀಯ ಸೋಪಾನ 4. ರಾಜ್ಯ ಪುರಸ್ಕಾರ 5. ರಾಷ್ಟ್ರಪತಿ ಪುರಸ್ಕಾರ. ಈ ತರಬೇತಿಗಳನ್ನು ಪಡೆಯಲು 3 ರಿಂದ 4 ವರ್ಷ ಅವಶ್ಯಕ. ರಾಜ್ಯ ಪುರಸ್ಕಾರದ ಪ್ರಮಾಣ ಪತ್ರವನ್ನು ರಾಜ್ಯಪಾಲರು ಸಹಿ ಮಾಡುತ್ತಾರೆ. ಹಾಗೆಯೆ ರಾಷ್ಟ್ರಪತಿ ಪುರಸ್ಕಾರದ ಪ್ರಮಾಣ ಪತ್ರವನ್ನು ರಾಷ್ಟ್ರಪತಿಗಳು ಸಹಿ ಮಾಡುತ್ತಾರೆ. ಇದನ್ನು ಪಡೆಯುವುದು ಒಂದು ಹೆಮ್ಮೆ.

ಇದಕ್ಕೆ ಸೇರುವುದರಿಂದ ಆಗುವ ಉಪಯೋಗ

| | |
|---|---|
| • ವ್ಯಕ್ತಿತ್ವ ವಿಕಸನ | • ಸಮಾಜದ ಬಗ್ಗೆ ಕಾಳಜಿ, ಕರ್ತವ್ಯ ಪ್ರಜ್ಞೆ |
| • ನಾಯಕತ್ವ | • ಸಮಾಜದಲ್ಲಿ ಘನತೆ, ಗೌರವ |
| • ಪೌರತ್ವ | • ದೇಶ ವಿದೇಶಗಳ ಕಾರ್ಯಕ್ರಮದಲ್ಲಿ ಭಾಗವಹಿಸುವ ಅವಕಾಶ |
| • ನಿಮ್ಮ ವಿರಾಮ ವೇಳೆಯ ಸದುಪಯೋಗ | • ಶಿಕ್ಷಣ, ಉದ್ಯೋಗ ಅವಕಾಶಗಳಲ್ಲಿ ಮನ್ನಣೆ |
| • ಜೀವನ ಶಿಕ್ಷಣ–ಕೌಶಲ, ಉತ್ತಮ ಜೀವನ | • ನನ್ನನ್ನು, ನನಗಾಗಿ ಅಲ್ಲ, ನಮಗಾಗಿ ಎಂಬ ವಿವೇಕ |

ಒಳೆಯ ಶಿಕ್ಷಣ ಮತ್ತು ಸ್ಕೌಟ್ಸ್ ಗೈಡ್ಸ್ ತರಬೇತಿ ಪಡೆದರೆ ಉತ್ತಮ ಜೀವನ ನಿಮ್ಮದಾಗಿರುತ್ತದೆ. ಬರಲಿರುವ ದಿನಗಳಲ್ಲಿ ಭಾರತದಲ್ಲಿ ಬೇರೆಲ್ಲಾ ರಾಷ್ಟ್ರಗಳಿಗಿಂತ ಯುವಕ–ಯುವತಿಯರ ಸಂಖ್ಯೆ ಹೆಚ್ಚಾಗಿರುತ್ತದೆ. ಯುವ ಶಕ್ತಿಗಾಗಿ ವಿಶ್ವವೇ ನಿಮ್ಮತ್ತ ನೋಡುತ್ತದೆ. ಇದಕ್ಕೆ ಸಿದ್ಧರಾಗಿ.

ಸ್ಕೌಟ್ಸ್ ಮತ್ತು ಗೈಡ್ಸ್ ಶುಭಾಶಯಗಳು,






| | | |
|---|---|---|
| 1. ಪಠ್ಯಪುಸ್ತಕ ಶೀರ್ಷಿಕೆ | : | 5ನೇ ತರಗತಿ – ಕನ್ನಡ – ಪರಿಸರ ಅಧ್ಯಯನ |
| 2. ಪ್ರಕಾಶಕರು ಮತ್ತು ಪ್ರಕಟಣೆಯ ಹಕ್ಕುಗಳು | : | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.) 100 ಅಡಿ ವರ್ತುಲ ರಸ್ತೆ, ಬನಶಂಕರಿ 3ನೇ ಹಂತ, ಬೆಂಗಳೂರು – 85 |
| 3. ಮುದ್ರಣ | : | 2017 |
| 4. ಮುದ್ರಿತ ಪ್ರತಿಗಳ ಸಂಖ್ಯೆ | : | ಉಚಿತ ವಿತರಣೆ : 5,99,889 ಪ್ರತಿಗಳು<br>ಪ್ರತಿಗಳ ಸಂಖ್ಯೆಮಾರಾಟ : 72,029 ಪ್ರತಿಗಳು |
| 5. ಮುದ್ರಣ ಕಾಗದ | : | 60 ಜಿ.ಎಸ್.ಎಂ. ಮ್ಯಾಪ್ಲಿತೋ |
| 6. ರಕ್ಷಾಪುಟ | : | 220 ಜಿ.ಎಸ್.ಎಂ. ಆರ್ಟ್‌ಕಾರ್ಡ್ |
| 7. ಮುದ್ರಕರು | : | ಶ್ರೀ ವೆಂಕಟೇಶ್ವರ ಎಂಟರ್‌ಪ್ರೈಸಸ್<br>ನಂ.56/ಎ, 9ನೇ ಮುಖ್ಯ ರಸ್ತೆ, 1ನೇ ಅಡ್ಡ ರಸ್ತೆ, ಕಾವೇರಿ ನಗರ,<br>ಬನಶಂಕರಿ 2ನೇ ಹಂತ,ಬನಶಂಕರಿ ಕೈಗಾರಿಕಾ ಪ್ರದೇಶ,<br>ಬೆಂಗಳೂರು – 560 070. ದೂರವಾಣಿ : 080–2671 1380<br>Email : vinayaka1000@yahoo.com |

ಕರ್ನಾಟಕ ಸರ್ಕಾರ

**ಕಾಲೇಜು ಶಿಕ್ಷಣ ಇಲಾಖೆ**

ದೂರವಾಣಿ:080-22343904/05




ಸಂಖ್ಯೆ:ಕಾಶಿಇ/ಶೈವಿ/218/ಸ್ಕೌಟ್ಸ್&ಗೈಡ್ಸ್/2015-16

ಕಾಲೇಜು ಶಿಕ್ಷಣ ಆಯುಕ್ತರ ಕಚೇರಿ
ಬೆಂಗಳೂರು-560001.
ದಿನಾಂಕ:14.06.2017

## ಸುತ್ತೋಲೆ

ವಿಷಯ: ಸ್ಕೌಟ್ಸ್ & ಗೈಡ್ಸ್‌ನ ರೋವರ್ಸ್ ಹಾಗೂ ರೇಂಜರ್ಸ್ ಸಮವಸ್ತ್ರವನ್ನು ಖರೀದಿಸುವ ಬಗ್ಗೆ.

ಉಲ್ಲೇಖ: 1) ಈ ಕಛೇರಿಯ ಸುತ್ತೋಲೆ ಸಂಖ್ಯೆ: ಕಾಶಿಇ/ಶೈವಿ/145/ಪಠ್ಯೇತರ/2010-11, ದಿನಾಂಕ:15.01.2013.

2) ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ & ಗೈಡ್ಸ್, ಕರ್ನಾಟಕ ರವರ ಕಛೇರಿ ಪತ್ರ ಸಂಖ್ಯೆ: BSG/SHQ/342/2017-18, Date:06.04.2017.

* * * * * * * *

ಇಲಾಖೆ ವ್ಯಾಪ್ತಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಭಾರತ್ ಸ್ಕೌಟ್ಸ್ & ಗೈಡ್ಸ್‌ನ ರೋವರ್ಸ್/ರೇಂಜರ್ಸ್ ಘಟಕಗಳಿಗಾಗಿ ಸಂಗ್ರಹಿಸುವ ಹಣವನ್ನು ಬಳಸಿಕೊಳ್ಳುವ ಬಗ್ಗೆ ಉಲ್ಲೇಖ-(1)ರ ಈ ಕಛೇರಿಯ ಸುತ್ತೋಲೆಯಲ್ಲಿ ಈಗಾಗಲೇ ಸ್ಪಷ್ಟ ಮಾರ್ಗಸೂಚಿಗಳನ್ನು ಜಾರಿಗೊಳಿಸಲಾಗಿದೆ. ಮುಂದುವರೆದು, ರೋವರ್ಸ್ ಹಾಗೂ ರೇಂಜರ್ಸ್‌ಗಳ ಸಮವಸ್ತ್ರಗಳು ಅವಶ್ಯಕವಿದ್ದಲ್ಲಿ ಸದರಿ ಖಾತೆಯಲ್ಲಿ ಹಿಂದಿನ ಶೈಕ್ಷಣಿಕ ವರ್ಷಗಳಲ್ಲಿ ಉಳಿಕೆಯಾಗಿರುವ ವಾರ್ಷಿಕವಾರು ಮೊತ್ತದ ವಿವರಗಳೊಂದಿಗೆ ಸಮವಸ್ತ್ರಗಳನ್ನು ಖರೀದಿಸಲು ಇಲಾಖಾ ಅನುಮತಿಗಾಗಿ ದಿನಾಂಕ:24.06.2017 ರೊಳಗಾಗಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

**ಕರಡು, ಆಯುಕ್ತರಿಂದ ಅನುಮೋದಿಸಲ್ಪಟ್ಟಿದೆ.**

ಕಾಲೇಜು ಶಿಕ್ಷಣ ನಿರ್ದೇಶಕರು

**ಇವರಿಗೆ:**

1. ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಪ್ರಾದೇಶಿಕ ಕಛೇರಿ, ಬೆಂಗಳೂರು, ಮೈಸೂರು, ಶಿವಮೊಗ್ಗ, ಮಂಗಳೂರು, ಧಾರವಾಡ ಮತ್ತು ಕಲಬುರಗಿ.
2. ಎಲ್ಲಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಪ್ರಾಂಶುಪಾಲರುಗಳಿಗೆ.
3. ಮಾಹಿತಿ ತಂತ್ರಜ್ಞಾನ ಅಧಿಕಾರಿಗಳು, ಕೇಂದ್ರ ಕಛೇರಿ, ಬೆಂಗಳೂರು-ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲು ಸೂಚಿಸಿದೆ.

**ಪ್ರತಿಯನ್ನು:**

1. ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ & ಗೈಡ್ಸ್, ಕರ್ನಾಟಕ, ನಂ.39, "ಶಾಂತಿಗೃಹ", ಅರಮನೆ ರಸ್ತೆ, ಬೆಂಗಳೂರು-560001.
2. ಕಛೇರಿ ಪ್ರತಿ.

19/06/17




ಸತ್ಯಸಾಯಿ ಬಾಬಾರವರ ಅಣ್ಣ, ಶೇಷಮರಾಜು, ಕಡಪ ಜಿಲ್ಲೆಯ ಕಮಲಾಪುರದ ಪಶುಪತಿ ಸುಬ್ಬರಾಜು ಅವರ ಮಗಳನ್ನು ಮದುವೆಯಾದರು. ಆ ಊರಲ್ಲಿ ಒಂದನೆಯ ಫಾರಂನಿಂದ ಮೂರನೆಯ ಫಾರಂವರೆಗೂ ಓದಲವಕಾಶವಿತ್ತು. ಪ್ರತಿಭಾವಂತನಾದ ಸತ್ಯನನ್ನು ಹೇಗಾದರೂ ಮಾಡಿ, ಮುಂದು ಮುಂದಕ್ಕೋದಿಸಿ, ಅವನನ್ನು ಡಿಗ್ರೀಧಾರಿಯೆನಿಸಿ, ಸರ್ಕಾರಿ ಹುದ್ದೆಯಲ್ಲಿರಿಸಿ ಮೆರೆಸಬೇಕೆಂದು, ತಂತೆ ತಾಯಿ ಆದಿಯಾಗಿ, ಎಲ್ಲರೂ ಆಸೆಪಟ್ಟರು. ಆದ್ದರಿಂದ ತಮ್ಮ ಅತ್ತೆ ಮಾವಂದಿರ ಆಶ್ರಯದಲ್ಲಿ ತಮ್ಮನನ್ನು ನಿಲ್ಲಿಸಿ, ಶೇಷಮರಾಜು "ಪಂಡಿತ" ಪರೀಕ್ಷೆಗೆ ತರಬೇತಾಗಲು ಅನಂತಪುರಕ್ಕೆ ಹೊರಟರು.

ಆ ಸ್ಕೂಲಲ್ಲಿ ಒಬ್ಬರು ಡ್ರಿಲ್ ಮಾಸ್ತರಿದ್ದರಂತೆ. ಅವರನ್ನು ಬಾಬಾ ಈಗಲೂ ಪ್ರೇಮದಿಂದ ನೆನೆಯುತ್ತಾರೆ. ಮಕ್ಕಳ ಮೇಲೆ ಅವರಿಗೆ ಎಲ್ಲೆ ಇಲ್ಲದ ಮಮತೆ. ಅವರು ಸ್ಕೌಟ್ ಮಾಸ್ತರಾಗಿಯೂ ಸೇವೆ ಸಲ್ಲಿಸುತ್ತಿದ್ದರಂತೆ. 'ಸ್ಕೌಟ್' ಎಂದರೆ, ಓದು ಬರಹದ ಮೇಲೆ ಆಸಕ್ತಿ ಇಲ್ಲದ ಹೈಕಳು, ಊರೂರು ತಿರುಗುವ ಉಂಡಾಡಿಗಳು ಎಂಬ ಅಭಿಪ್ರಾಯ ಜನರಲ್ಲಿ ಆಗಲೂ ಇತ್ತು. ಸತ್ಯನಂತಹ ಶೀಲವಂತ ಹುಡುಗರು ಆ ದಳಕ್ಕೆ ಸೇರಿದರೆ, ಈ ಅಭಿಪ್ರಾಯವನ್ನು ಜನಮನದಿಂದ ತೊಡೆದು ಹಾಕಬಹುದೆಂದು ಡ್ರಿಲ್ ಮಾಸ್ತರು ಅರಿತರು. ಅಷ್ಟು ನಂಬಿಕೆ ಇತ್ತು ಊರಿನವರಿಗೆಲ್ಲ.....ಸತ್ಯನ ಪ್ರಾಮಾಣಿಕತನದಲ್ಲಿ !

ಬಹಳ ದಿವಸದವರೆಗೂ ಸತ್ಯ ಅವರ ಕರೆಗೆ ಓಗೊಡಲಿಲ್ಲ; ತಟಸ್ಥನಾಗಿಯೇ ಇದ್ದ. ಮಾಸ್ತರು ಅವನ ಆಪ್ತ ಗೆಳೆಯರಿಬ್ಬರನ್ನು ತಮ್ಮ ಪಿತೂರಿಗೊಳಪಡಿಸಿಕೊಂಡರು. ಅವರ ಒತ್ತಾಯಕ್ಕೆ ಸತ್ಯನ ಮನ ಕರಗಿತು. ಅಲ್ಲದೆ, ಸ್ಕೌಟ್ ದಳದ ಸಮವಸ್ತ್ರವನ್ನು ಸಿದ್ಧಪಡಿಸಿ ಅವರಿಬ್ಬರೂ ಸತ್ಯನ ಡೆಸ್ಕಿನೊಳಗೆ ಗೋಪ್ಯವಾಗಿರಿಸಿಬಿಟ್ಟಿದ್ದರು. ಅವರ ಸ್ನೇಹಕ್ಕೆ ಸತ್ಯನ ನಿರ್ಧಾರ ಸಡಿಲವಾಯಿತು. ಅವನ ಅಂತರಂಗ ಒಲಿಯಿತು! ದಳಕ್ಕೆ ದಾಖಲಾದ.

ಅಷ್ಟರಲ್ಲಿ ಆ ಪ್ರಾಂತ್ಯಕ್ಕೆಲ್ಲ ಭಾರೀ ಪರಿಷೆ ಎನಿಸಿದ ಪುಷ್ಪಗಿರಿ ಜಾತ್ರೆ ಬಂತು! ಸ್ಕೌಟ್ ದಳದ ಸೇವಾ ಕೆಲಸಗಳಿಗೆ ಅಲ್ಲಿ ಒಳ್ಳೆ ಸುಗ್ಗಿ ಎಂದು ಡ್ರಿಲ್ ಮಾಸ್ತರು ಕಂಡುಕೊಂಡರು.

ಪುಷ್ಪಗಿರಿಗೆ ಹೋಗಿ ಬರಲು ಬಸ್ಸು ಪ್ರಯಾಣದ ಖರ್ಚು, ಅಲ್ಲಿನ ಕ್ಯಾಂಪು ವ್ಯವಸ್ಥೆಯಂತೆ ಊಟ ತಿಂಡಿ ಖರ್ಚು, ಎಲ್ಲ ಒಟ್ಟು, ಪ್ರತಿ ಸ್ಕೌಟೂ ಹತ್ತು ರೂಪಾಯಿ ತರಬೇಕೆಂದೂ ನಿರ್ಧಾರವಾಯಿತು. ಆದರೆ ಸತ್ಯನ ಕಿಸೆಯಲ್ಲಿ ಕಿಲುಬು ಕಾಸೂ ಇರಲಿಲ್ಲ.

ಆದರೆ ಖರ್ಚು? ಅದನ್ನು ನಿರ್ವಹಿಸುವ ಬಗೆ?........."ಸಾರ್! ನೀವೆಲ್ಲಹೊರಡುವ ದಿನವೇ ನಿಮ್ಮೊಂದಿಗೆ ಬರಲು ನನಗನುಕೂಲವಿಲ್ಲ...... ನಾನು ಅನಂತರ ಹೊರಟು, ಕ್ಯಾಂಪ್ ಪ್ರಾರಂಭವಾಗುವಾಗ ಅಲ್ಲಿ ನಿಮ್ಮ ಜೊತೆ ಇರುತ್ತೇನೆ" – ಎಂದು ಹೇಳಿ, ಬಸ್ ಚಾರ್ಜನ್ನುಳಿಸಿದ ಸತ್ಯ; ನಡೆದೇ ಹೋಗಲು ಸಂಕಲ್ಪಿಸಿದ! "ಸಾರ್! ನನ್ನ ಬಂಧುಗಳು ಹಲವರು ಜಾತ್ರೆಗೆ ಬರುತ್ತಾರೆ. ಅವರೊಂದಿಗೆ ಇದ್ದು, ಅವರಲ್ಲೇ ಊಟತಿಂಡಿ ವಗೈರೆ ಮಾಡಬೇಕೆಂದು ಅವರು

ನಿರ್ಬಂಧಿಸುತ್ತಿದ್ದಾರೆ. ಒಪ್ಪದೆ ವಿಧಿ ಇಲ್ಲ, ಸಾರ್! ಅಂತೂ ಇಂತೂ ನಿಮ್ಮ ಕ್ಯಾಂಪಿನ ಕ್ರಮದಂತೆ ವೇಳೆ ವೇಳೆಗೆ ಅಲ್ಲಿ ಹಾಜರಾಗುತ್ತೇನೆ"– ಎಂದು ಹೇಳಿ, ಊಟ ತಿಂಡಿಗಳಿಗಾಗಿ ಕೊಡಬೇಕಾದ ರುಸುಮನ್ನು ಉಳಿಸಿದ, ಸತ್ಯ. ಹಾಗೂ ಹೀಗೂ ಕಾಲ ಹಾಕೋಣ ಎಂದು ಸಂಕಲ್ಪಿಸಿದ. ಎಲ್ಲಾಗಲಿ, ಎಂದಾಗಲಿ, ಗುಡಿಯ ಜಾತ್ರೆಗೆಂದು ಬರುವ ಜನವೆಲ್ಲ ಬಾಬಾರವರ ಬಂಧುಗಳೇ ಅಲ್ಲವೇ?

ಆದರೆ; "ಹಾಗೂ ಹೀಗೂ ಕಾಲ ಹಾಕು"ವುದಕ್ಕೂ ಅಲ್ಪ ಸ್ವಲ್ಪ ಕಾಂಚಾಣ ಬೇಕಲ್ಲವೇ? ಅದಕ್ಕಾಗಿ ಸತ್ಯ ಒಂದು ಉಪಾಯ ಹೂಡಿದ. ಹಿಂದಿನ ವರ್ಷ ತಾನು ಶಾಲೆಗೆ ಹೊತ್ತು ತಿರುಗಿದ ಪುಸ್ತಕಗಳನ್ನೆಲ್ಲ ಒಬ್ಬ ಹುಡುಗನಿಗೆ ಮಾರಿದ. 'ಹನ್ನೆರಡು ರೂಪಾಯಿಗೆ ಸಿಕ್ಕಿದರೆ ನನ್ನ ಪುಣ್ಯ' ಎಂದಿದ್ದ ಆ ಹುಡುಗನಿಂದ, ಸತ್ಯ ಐದೇ ರೂಪಾಯಿ ಇಸುಕೊಂಡು ಇಡೀ ಗಂಟನ್ನು ಅವನ ಕೈಯಲ್ಲಿಟ್ಟು, "ಸಾಕು! ಸಾಕು! ನನಗೆ ಈಗ ಬೇಕಾಗಿರುವುದ ಐದೇ ರೂಪಾಯಿ"– ಎಂದ, ನಗುತ್ತ!

ಹದಿನೈದು ಹದಿನಾರು ಮೈಲಿ ಪ್ರಯಾಣ. ಎಷ್ಟಾದರೂ ಮಾನವ ದೇಹ. ಪುಷ್ಪಗಿರಿ ಹೊಳೆಯ ಮರಳು ದಿಣ್ಣೆಯ ಮೇಲೆ ಟವಲು ಹಾಸಿ, ಬ್ಯಾಗನ್ನು ದಿಂಬಾಗಿರಿಸಿಕೊಂಡು ಸತ್ಯ ಮಲಗಿದ. ಜನಸಂದಣಿಯ ನಡುವೆ ನೇಸರು ಮೂಡಿದಾಗ, ಬ್ಯಾಗೂ ಅದರೊಳಗಿದ್ದ ಸಮಸ್ತ ಸಂಪತ್ತೂ ಯಾವನೋ ಒಬ್ಬ ಪುಣ್ಯವಂತನ ಕೈಗೆ ವರ್ಗವಾಗಿ ಹೋಗಿತ್ತು!

"ಗಟ್ಟಿಯಾಗಿ ನಕ್ಕೆ!" – ಎಂದರು ಬಾಬಾ. ಅವರಿಗೆ ಕೋಪ ಬರಲಿಲ್ಲವಂತೆ! ದಿಗ್ಭ್ರಮೆ ಹಿಡಿಯಲಿಲ್ಲವಂತೆ! ಎದ್ದು ಹತ್ತು ಹೆಜ್ಜೆ ಮುಂದೆ ಅಡಿಯಿಡುವುದರೊಳಗೆ, ಅಲ್ಲಿದ್ದ ಬಂಡೆಯೊಂದರ ಮೇಲೆ, ಯಾರೋ ಇರಿಸಿ ಹೋಗಿದ್ದ ಒಂದು ಕಟ್ಟು ಬೀಡಿ ಹಾಗೂ ಒಂದಾಣೆ, ಇವು ಬಾಬಾ ಅವರ ದೃಷ್ಟಿಗೆ ಗೋಚರವಾದುವಂತೆ!

ಆ ನಾಣ್ಯವನ್ನು ಕೈಯಲ್ಲಿ ಹಿಡಿದು, ಸತ್ಯ, ಪರಿಷೆ ಮೈದಾನಕ್ಕೆ ಹೊರಟ. ಅಲ್ಲೊಬ್ಬ ಮಹಾನುಭಾವ ಸತ್ಯನ ಸೇವೆಗಾಗಿ ಕುಳಿತಿದ್ದ! ಸುತ್ತಲೂ ಚೌಕಗಳಲ್ಲಿ ಅಂಕಿಗಳನ್ನು ಬರೆದಿದ್ದ ಭಾಗ್ಯಚಕ್ರದ ಮೇಣದ ಬಟ್ಟೆಯನ್ನು ಮುಂದೆ ಹರಡಿಕೊಂಡು ಅವನು ಠೀವಿಯಿಂದ ಕುಳಿತಿದ್ದ. ಅವನ ತಟ್ಟೆಯೊಳಕ್ಕೆ ಕಾಲಾಣೆಯನ್ನೆಸೆದು, ಆ ಬಟ್ಟೆಯ ನಡುವೆ ನೆಲಕ್ಕೆ ಹೊಡೆದಿರುವ ಗೂಟದ ಮೇಲಿನ ಸೂಜಿಯನ್ನು ಕೈಯಿಂದ ಬಿರ್ರನೆ ತಿರುಗಿಸಬೇಕು..... ಅದು ಯಾವ ಚೌಕದೆದುರು ನಿಲ್ಲುತ್ತದೊ ಆ ಚೌಕದಲ್ಲಿ ಬರೆದಿರುವ ಅಂಕಿಯಷ್ಟು ಹೆಚ್ಚು ಹಣವನ್ನು ಅವನು ನಿಮಗೆ ಕೊಟ್ಟು ಬಿಡುತ್ತಾನೆ.

ಸತ್ಯ ಅವನಲ್ಲಿಗೆ ಹೋಗಿ, ಸೂಜಿ ತಿರುಗಿಸಿ, ಹನ್ನೆರಡಾಣೆಯಷ್ಟು ಸಂಪಾದಿಸಿದ. "ಅಷ್ಟೇ ಸಾಕು ಎಂದು ನಾನು ಅಲ್ಲಿಂದ ಹೊರಟು ಬಂದು ಬಿಟ್ಟೆ. ಪಾಪ. ಅವನ ಹೊಟ್ಟೆಯ ಮೇಲೆ ಅನ್ಯಾಯವಾಗಿ ಹೊಡೆಯಬಾರದೆನಿಸಿತು, ನನಗೆ" ಎಂದು ಬಾಬಾ. ಊಟ ಆಯಿತೇನಯ್ಯ ಎಂದು ಮಾಸ್ತರು ಕೇಳಿದಾಗಿ, ಅವರ ಅನುಮಾನ ಪರಿಹಾರಕ್ಕಾಗಿ ಕೈ ನೀಡುವ ........ ಗಮಗಮ ವಾಸನೆ ನೋಡಿ, 'ಪರವಾ ಇಲ್ಲ! ನಿನ್ನ ಬಂಧುಗಳು ಸೊಗಸಾದ ಮೃಷ್ಟಾನ್ನ ಭೋಜನವನ್ನೇ ಹಾಕುತ್ತಿದ್ದಾರೆ! ನೀನೇ ಪುಣ್ಯವಂತ. ಅಲ್ಲೇ ಊಟ ಮಾಡಿಕೊ, ದಿನವೂ, ಎನ್ನುವರು ಮಾಸ್ತರು.

"ಪುಷ್ಕಳವಾಗಿ ಊಟ ಬೀಳುತ್ತಾ. ಇದೆ. ನಿಗೇನು?" – ಎನ್ನುತ್ತ ಮಾಸ್ತರು ಸತ್ಯನಿಗೇ ಹೆಚ್ಚು ಕೆಲಸ ಕೊಡುತ್ತಿದ್ದರು. ಅವನ್ನೆಲ್ಲ ನಗುನಗುತ್ತ ನೆರವೇರಿಸಿದ್ದೂ ಅಲ್ಲದೆ, ತನ್ನ ಸಂಗಡಿಗರಿಗೆ ಸೇವಾತತ್ವವನ್ನೂ ಸುಲಭವಾಗಿ ವಿಶದಪಡಿಸುತ್ತಿದ್ದ. "ಪರೋಪಕಾರ ಎಂದು ಹೇಳುವುದು ತಪ್ಪು. ಎಲ್ಲ ಬಗೆಯ ಉಪಕಾರಗಳನ್ನೂ ನಾವು ಮಾಡುವುದು ನಮಗೇ! ಏಕೆಂದರೆ, 'ಪರ' ಎಂಬುದೇ ಇಲ್ಲ. ಆ ಇನ್ನೊಬ್ಬ, ನಮಗಿಂತ ಬೇರೆಯವನೇ ಅಲ್ಲ. ಅವನೂ ನಾವೇ! ಹೆಸರು, ಆಕಾರ ಬೇರೆ ಇರಬಹುದು, ಅಷ್ಟೆ"– ಎಂದು ಬಾಬಾ ಹೇಳುತ್ತಿದ್ದರಂತೆ. "ಪರರಿಗೆ ದ್ರೋಹ ಮಾಡಿದರೂ ಅದು ನಮಗೆ ಮಾಡಿಕೊಂಡ ದ್ರೋಹವೇ" ಎಂದು ಅವರು ಸಹಪಾಠಿಗಳನ್ನು ಎಚ್ಚರಿಸಿದರಂತೆ.

ಕಮಲಾಪುರಕ್ಕೆ ಆ ಸ್ಕೌಟ್ ದಳ ಹಿಂತಿರುಗಿದಾಗ, ಅದೇ ಬಸ್ಸಿನಲ್ಲೇ ಸತ್ಯನನ್ನೂ ಕರೆದು ತರಲು ಮಾಸ್ತರು ತುಂಬಾ ಪ್ರಯತ್ನಿಸಿದರು. ಆದರೆ ಬಸ್ಸು ಚಾರ್ಜುಕೊಡದೆ, ಇತರರ ಹಂಗಿಗೊಳಪಡಲು ಇಷ್ಟವಿಲ್ಲದೆ, ಸತ್ಯ ಹೇಗೋ ನುಣಿಚಿ ಕೊಂಡು ಅವರಿಂದ ಬೇರೆಯಾಗಿ, ನಡೆದೇ ವಾಪಸ್ ಬಂದ!

ಕೃಪೆ: ಪ್ರೊ॥ ನಾ. ಕಸ್ತೂರಿಯವರ "ಸತ್ಯಂ–ಶಿವಂ–ಸುಂದರಂ" ಭಾಗ–೧ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ.



# The Bharat Scouts and Guides

National Headquarters

To
All the State Secretaries,
State Associations of
The Bharat Scouts and Guides,
**INDIAN UNION.**






**Circular No. : 72/ 2017**
**Dated : 13th June, 2017**

**SUB.: RENEWAL OF TRADE MARK REGISTRATION INDIA UNTIL NOVEMBER 2026.**

Dear Sir/Madam,

We are pleased to inform you that the renewal of **"SCOUTS Creating a Better World"** and device as a Trade Mark in India has been going on for some time. We are happy the authorities in India have now issued the renewal certificate under the name of the World Scout Bureau (as attached) which is in electronic form, hence no signature. The Trade Mark has been renewed in India for another 10 years until 17th November 2026. Along with this communication, I am also attaching the formal confirmation letter issued by World Organization of Scout Movement (WOSM) Intellectual Property Consultants - SABA who acts on behalf of World Scout Bureau (WSB) for all Trade Mark registrations purposes world wide. The local agents for SABA is Remfry & Sagar.

Bharat Scouts and Guides being the WOSM member in India, WSB takes in full confidence that BSG will be the custodian of the Trade Mark in India in all forms. Hence we urge you to take every step locally and to inform all District level BSG Headquarters accordingly and highlight the local registration of the Trade Mark and to protect the Trade Mark in all possible manner. At the same time we request State Associations to alert National Headquarters of any misuse of the Trade Mark by any other party and to keep an eye over the proper use of the Trade Mark in India.

It is also to apprised all the State Associations that the WOSM Brand Protection guidelines and policies, WSB should be approached for the issue of the License Agreement for the use of the Trade Mark for any non-commercial purpose, meaning use of the Trade Mark in items not for sale. The License Agreement for any commercial use of the Trade Mark will be issued by the World Scout Shop Limited (WSSL) and they should be approached for the same.

Thanking you,

Yours in Scouting,

**(KRISHNASWAMY R.)**
**OFFICIATING DIRECTOR**

**Encl. As stated above**

**Copy to: -**

01. All the Office Bearers of the Bharat Scouts & Guides.
02. Chairman/ Secretary, Railway Scout & Guide Board, Rail Bhawan, New Delhi.
03. The Commissioner, Kendriya Vidyalaya Sangathan, 18 Institutional Area, Sahid Jeet Singh Marg, New Delhi-110016
04. The Commissioner, Navodaya Vidyalaya Samiti, Institutional Area, B-15, Sector-62, Noida, Uttar Pradesh-201309.

DDBP/YP/13.06.2017

{ 1 }

INTELLECTUAL PROPERTY INDIA




भारत सरकार/GOVERNMENT OF INDIA
व्यापार चिह्न रजिस्ट्री/Trade Marks Registry

बौद्धिक संपदा भवन/Boudhik Sampada Bhawan, Plot No. 32,
सेक्टर 14/Sector 14,
द्वारका/Dwarka,
नई दिल्ली/New Delhi-110075

संख्या: आर एल सी/RLC/256818

दिनांक/Date 13/11/2016 1:27:52 PM

विषय: पंजीकृत व्यापार चिह्न संख्या 1505176 वर्ग 99

**Subject : Renewal of registration of Trade Mark No 1505176 Class 99**

आपको यह सूचित किया जाता है कि पंजीकृत व्यापार चिह्न संख्या 1505176 वर्ग 99 का नवीकरण दिनांक 17/11/2016 से अगले 10 वर्षों की अवधि तक किया गया है।

I have to inform you that the Registration of Trade Mark No 1505176 in class 99 has been renewed for a period of Ten years from the 17/11/2016

नवीकरण संबंधी सूचना व्यापार चिह्न पत्रिका संख्या . 1772 में विज्ञापित की गई है।

The renewal will be advertised in the Trade Mark Journal No. 1772



भवदीय/Yours faithfully

कृते पंजीकार व्यापार चिह्न
For Registrar of Trade Marks

To,
REMFRY & SAGAR
REMFRY HOUSE AT THE MILLENNIUM PLAZA SEC 27, GURGAON 122009, NEW DELHI NATIONAL CAPITAL REGION INDIA

*This is a computer genereated certificate, hence no signature required.




Saba & Co. Intellectual Property s.a.l. (Offshore)
MOF No. 102835, CR No. 600– Beirut

Saba House
Said Freiha Street
Hazmieh, Beirut
Lebanon
P.O. Box 11-9421

T. +961 5 45 48 88
F. +961 5 45 48 44

**E-Mail**

Your ref: TM/2006/11912
Our ref: HO/T29679/49/16/IN

June 6, 2017

Bureau Mondial du Scoutisme
Rue Henri-Christiné 5
1205 Genève
Switzerland

**Certificate of Renewal**

Re: Renewal of trademark "SCOUTS Creating a Better World' and Device " No. 106164 for Bureau Mondial du Scoutisme in India

Dear Sirs,

Further to our notice of filing dated October 31, 2016, we are pleased to enclose herewith the relative certificate of renewal of the trademark set forth below, in electronic copy. Due to the implementation of the new system at the Indian Trade Marks Registry, the Certificate in the subject matter has been issued in electronic format only.

We assure you of our best attention.

Very truly yours,
Ahmad Sayed/RS
Saba & Co. IP

| Trademark | Class(es) | Filing No. | Next Renewal Date |
|---|---|---|---|
| SCOUTS | 16, 35, 41 | 1505176 | November 17, 2026 |

headoffice@sabaip.com
www.sabaip.com

# ಅಭಿನಂದನೆಗಳು



ಶ್ರೀಮತಿ ಎಲ್.ಸಿ. ಹಿರೇಮಠ, ಶಿಕ್ಷಣಶಾಸ್ತ್ರ ಉಪನ್ಯಾಸಕಿ, ಶ್ರೀ ಅನ್ನದಾದೇಶ್ವರ ಕಲಾ, ವಿಜ್ಞಾನ ಹಾಗೂ ವಾಣಿಜ್ಯ ಮಹಾವಿದ್ಯಾಲಯ ನರೇಗಲ್ಲ ಮತ್ತು ಗದಗ ಜಿಲ್ಲಾ ರೇಂಜರ್ ಲೀಡರ್ ಇವರು ಮಾರ್ಚ್ 3 ರಂದು 'ಶಿಕ್ಷಣಶಾಸ್ತ್ರ' ವಿಷಯದಲ್ಲಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಪಿಹೆಚ್.ಡಿ., ಪದವಿಯನ್ನು ಪಡೆದುಕೊಂಡಿದ್ದಾರೆ.



ಕಾರವಾರ ಜಿಲ್ಲೆ ಅಂಕೋಲಾ ತಾಲ್ಲೂಕಿನ ಹಟ್ಟಿಕೇರಿಯ ಜೇಸೀ ಆಂಗ್ಲ ಮಾಧ್ಯಮ ಪ್ರೌಢಶಾಲೆ 9ನೇ ತರಗತಿಯ ಗೈಡ್ ಕುಮಾರಿ ಸೋಹನಿ ಮಂಗಲದಾಸ್ ಕಾಮತ್ ಇವಳು ಅಮೇರಿಕಾದ ಪ್ರತಿಷ್ಠಿತ ನಾಸಾ ಬಾಹ್ಯಾಕಾಶ ಸಂಸ್ಥೆಯಲ್ಲಿ ಎಡ್ವರ್ ಸಂಸ್ಥೆಯು ಆಯೋಜಿಸಿದ ವಿಶೇಷ ಶೈಕ್ಷಣಿಕ ಅಧ್ಯಯನದಲ್ಲಿ ಪಾಲ್ಗೊಂಡು ಗಗನಯಾತ್ರಿಗಳೊಂದಿಗೆ ಸಂವಾದ, ಉಪಗ್ರಹ ಉಡಾವಣೆ ಬಗ್ಗೆ ವಿಶೇಷ ಮಾಹಿತಿ, ಶ್ವೇತಭವನದ ಭೇಟಿ ಇತ್ಯಾದಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತಾರೆ.



ಕಳೆದ 5 ವರ್ಷಗಳಿಂದ ಸ್ಕೌಟ್ಸ್-ಗೈಡ್ಸ್ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವ ಈಕೆ ಸೃಜನಾತ್ಮಕ ಹಾಗೂ ಕ್ರಿಯಾಶೀಲ ಗೈಡ್ ಆಗಿದ್ದಾಳೆ. ಅವಳ ಭವಿಷ್ಯ ಉಜ್ವಲವಾಗಲಿ ಎಂದು ಹಾರೈಸುತ್ತೇವೆ.

–ರಾಜ್ಯ ಕಾರ್ಯದರ್ಶಿ

# ಶ್ರದ್ಧಾಂಜಲಿ

**ಶ್ರೀಮತಿ ಸರೋಜಿನಿ ಸಿದ್ದಣ್ಣ ಸಕ್ರಿ,** ರಾಜಕೀಯ ಧುರೀಣರಾದ ಶ್ರೀ ಸಿದ್ದಣ್ಣ DCC ಎಮ್. ಸಕ್ರಿ ಇವರ ಧರ್ಮಪತ್ನಿ ಇವರು ವಿಜಯಪುರದಲ್ಲಿ ನಿಧನರಾಗಿರುತ್ತಾರೆ. ಅವರಿಗೆ ಮೂವರು ಪುತ್ರರು ಇಬ್ಬರು ಪುತ್ರಿಯರು ಹಾಗೂ ಅಪಾರ ಬಂದು ಬಳಗ ಇದ್ದಾರೆ.

ಇವರ ನಿಧನದಿಂದ ಉಂಟಾದ ನೋವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ನೀಡಲೆಂದು ಮತ್ತು ಮೃತರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ



ಬೆಂಗಳೂರು ದಕ್ಷಿಣ ಜಿಲ್ಲೆ ಜಯನಗರ ಸ್ಥಳೀಯ ಸಂಸ್ಥೆ ವತಿಯಿಂದ ಡೆಲ್ಲಿ ಪಬ್ಲಿಕ್ ಶಾಲೆಯಲ್ಲಿ ಜರುಗಿದ ವಿಶ್ವ ಯೋಗ ದಿನಾಚರಣೆ ಕಾರ್ಯಕ್ರಮದಲ್ಲಿ ಭಾಗವಹಿಸಿರುವ ಸ್ಕೌಟ್-ಗೈಡ್‌ಗಳು.



ಕಾರವಾರ ಜಿಲ್ಲೆ ಹೊನ್ನಾವರದ ನ್ಯೂ ಇಂಗ್ಲೀಷ್ ಸ್ಕೂಲ್ ಸ್ಕೌಟ್-ಗೈಡ್‌ಗಳು ಬಂಗಾರ ಕುಸುಮ ಜಲಪಾತದಲ್ಲಿ ಯೋಗದ ತಾಲೀಮು ಮಾಡುತ್ತಿರುವುದು.



ಚಿತ್ರದುರ್ಗ ಜಿಲ್ಲಾಡಳಿತ ಮತ್ತು ಭಾರತ್ ಸ್ಕೌಟ್ಸ್ & ಗೈಡ್ಸ್ ಸಹಯೋಗದಲ್ಲಿ ಜರುಗಿದ 'ಅಂತರರಾಷ್ಟ್ರೀಯ ಯೋಗ ದಿನಾಚರಣೆ' ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.




ಜೂನ್ 05ರಂದು ರಾಮನಗರ ಜಿಲ್ಲೆ ಸಾತನೂರು ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಜರುಗಿದ ವಿಶ್ವ ಪರಿಸರ ದಿನದಂದು ಸ್ಕೌಟ್ಸ್-ಗೈಡ್ಸ್‌ಗಳಿಗೆ ಪರಿಸರ ಜಾಗೃತಿಯನ್ನು ಮೂಡಿಸಿ ಸಸಿಗಳನ್ನು ವಿತರಿಸಲಾಯಿತು.



ಜೂನ್ 05ರಂದು ತುಮಕೂರಿನ ಸರ್ವೋದಯ ಶಾಲೆಯ ಗೈಡ್‌ಗಳು "ವಿಶ್ವ ಪರಿಸರ ದಿನಾಚರಣೆ" ಪ್ರಯುಕ್ತ ಶಾಲೆಯ ಆವರಣದಲ್ಲಿ ಸಸಿ ನೆಟ್ಟು ನೀರೆರೆದರು.



ಜೂನ್ 12ರಂದು ಬಳ್ಳಾರಿ ಜಿಲ್ಲೆ ಸಿರುಗುಪ್ಪ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಹಮ್ಮಿಕೊಂಡಿದ್ದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದ ಉದ್ಘಾಟನಾ ಕಾರ್ಯಕ್ರಮದಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಸಂಸ್ಥೆ ಪದಾಧಿಕಾರಿಗಳು ಹಾಗೂ ಸ್ಕೌಟರ್-ಗೈಡರ್‌ಗಳನ್ನು ಕಾಣಬಹುದು.

Regd. as News Paper (Magazine) RNI No: 13348/1959. Postal Regd. No. KA/BGGPO/2580/2015-17
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 04+32 =





ಜೂನ್ 17 ರಿಂದ 22ರ ವರೆಗೆ ಹಾಸನದಲ್ಲಿ ಹಮ್ಮಿಕೊಂಡಿದ್ದ "ಸಮುಧಾಯ ಅಭಿವೃದ್ಧಿ" ಶಿಬಿರದಲ್ಲಿ ರೋವರ್-ರೇಂಜರ್‌ಗಳು ಕಲ್ಯಾಣಿಗಳನ್ನು ಸ್ವಚ್ಛಗೊಳಿಸುತ್ತಿರುವುದು.



ಜೂನ್ 17ರಂದು ದಾವಣಗೆರೆ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ "ವಿಶ್ವ ಪರಿಸರ ದಿನಾಚರಣೆ" ಪ್ರಯುಕ್ತ ಗೈಡ್‌ಗಳು ವಿವಿಧ ರೀತಿಯ ಬೀಜದ ಉಂಡೆಗಳನ್ನು ತಯಾರಿಸುತ್ತಿರುವುದು.



ಜೂನ್ 21ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆ ವತಿಯಿಂದ ಶ್ರೀ ಪ್ರಭಾಕರ ಗುರೂಜಿಯವರ ಋಷಿ ಸಂಸ್ಕೃತಿ ವಿದ್ಯಾಕೇಂದ್ರ ಇವರ ಸಹಕಾರದಲ್ಲಿ ರಾಜ್ಯ ಕೇಂದ್ರ ಕಾರ್ಯಾಲಯ ಶಾಂತಿಗೃಹದಲ್ಲಿ ಜರುಗಿದ 3ನೇ ಅಂತರಾಷ್ಟ್ರೀಯ ಯೋಗ ದಿನಾಚರಣೆಯಲ್ಲಿ ಭಾಗವಹಿಸಿರುವ ಸ್ಕೌಟ್-ಗೈಡ್‌ಗಳು.










If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha**, #39, Palace Road, Bengaluru - 560 001. **Publisher & Editor : Siddaiah**, IAS (Retd.)
**Printed by : L. Lingappa, M.D. at Sathyasri Printers Pvt. Ltd.**, 16/1, 3rd Cross, 2nd Main, Kasturiba Nagar, Mysore Road, Bengaluru-26